CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೮ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೮, ೨೦೦೩ (ಭಾದ್ರಪದ ೨೭, ಶಕ ವರ್ಷ ೧೯೨೫) | ಸಂಚಿಕೆ ೩೮ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಲೋಕೋಪಯೋಗಿ ಸಚಿವಾಲಯ

**ವಿಷಯ:** ಬೆಂಗಳೂರಿನಲ್ಲಿರುವ ಲೋಕೋಪಯೋಗಿ ಇಲಾಖೆಯ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆಯನ್ನು ಪರಿಷ್ಕರಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರಿ ಆದೇಶ ಸಂಖ್ಯೆ: ಲೋಇ 40 ಬಿಎಂಪಿ 84, ದಿನಾಂಕ: 24.12.1990.
2. ಸರ್ಕಾರಿ ಆದೇಶ ಸಂಖ್ಯೆ: ಲೋಇ 59 ಬಿಪಿಎಂ 92, ದಿನಾಂಕ: 1.8.1992.
3. ಸರ್ಕಾರಿ ಆದೇಶ ಸಂಖ್ಯೆ: ಲೋಇ 115 ಬಿಪಿಎಂ 82, ದಿನಾಂಕ: 18.7.1994.
4. ಸರ್ಕಾರಿ ಆದೇಶ ಸಂಖ್ಯೆ: ಲೋಇ 3 ಬಿಜಿಎಂ 96, ದಿನಾಂಕ: 28.8.1996.
5. ಮುಖ್ಯ ಎಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿಎಸ್:ಬಿಸಿಡಿ:ಅ.ಗೃ.ಪ.ಮು.ಬಾ.ಪ/2001-02, ದಿನಾಂಕ:27.8.2002.

**ಪ್ರಸ್ತಾವನೆ:**

ಬೆಂಗಳೂರಿನಲ್ಲಿರುವ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುವ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆಯನ್ನು ರಾಜ್ಯದ ಎಂ.ಪಿ, ಎಂ.ಎಲ್.ಎ, ಮಾಜಿ ಎಂ.ಪಿ, ಎಂ.ಎಲ್.ಎ, ಎಂ.ಎಲ್.ಸಿ ಹಾಗೂ ಖಾಸಗಿ ವ್ಯಕ್ತಿಗಳಿಗೆ ಮತ್ತು ಸ್ವಾತಂತ್ರ್ಯ ಯೋಧರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (1) ರಿಂದ (4)ರ ಆದೇಶಗಳಲ್ಲಿ ಬಾಡಿಗೆಯನ್ನು ನಿಗದಿಪಡಿಸಿ ಆದೇಶ ಹೊಡಿಸಲಾಗಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ: (5)ರ ಮುಖ್ಯ ಎಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರದಲ್ಲಿ ಬೆಂಗಳೂರಿನಲ್ಲಿರುವ ಲೋಕೋಪಯೋಗಿ ಇಲಾಖೆಯ ಅಧೀನದಲ್ಲಿರುವ ಕಾವೇರಿ ಅತಿಥಿಗೃಹದ ಕೊಠಡಿಗಳ ನಿರ್ವಹಣೆಗೆ ಅಧಿಕವಾದ ವೆಚ್ಚವಾಗುತ್ತಿದ್ದು ಮತ್ತು ತೀರಾ ಕಡಿಮೆ ದರದಲ್ಲಿ ಅತಿ ಹೆಚ್ಚಿನ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ ಹಾಗೂ ಪ್ರಸ್ತುತ ಈ ಕೊಠಡಿಗಳಿಂದ ಬರುವ ಬಾಡಿಗೆಯಿಂದ ಈ ಕೊಠಡಿಗಳನ್ನು ಸುಸ್ಥಿತಿಯಲ್ಲಿಡುವುದು ತುಂಬಾ ಕಷ್ಟಕರವಾಗಿರುತ್ತದೆ. ಆದುದರಿಂದ ಈ ಕೊಠಡಿಗಳ ಬಾಡಿಗೆಯನ್ನು ಪರಿಷ್ಕರಿಸುವಂತೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲ್ಕಂಡ ಎಲ್ಲಾ ಅಂಶಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 34 ಬಿಟಿಐ 2001, ಬೆಂಗಳೂರು, ದಿನಾಂಕ: 14ನೇ ಆಗಸ್ಟ್ 2003**

ಬೆಂಗಳೂರಿನ ಕಾವೇರಿ ಅತಿಥಿಗೃಹದ ಕೊಠಡಿಗಳ ಬಾಡಿಗೆ ದರವನ್ನು ಈ ಕೆಳಕಂಡಂತೆ ಪರಿಷ್ಕರಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರದ ಮಂಜೂರಾತಿ ನೀಡಿದೆ. ಈ ಪರಿಷ್ಕೃತ ದರಗಳು ಈ ಆದೇಶ ಹೊರಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಗೆ ಮಾತ್ರ ಚಾಲ್ತಿಯಲ್ಲಿರುತ್ತದೆ.

| ಕ್ರ. ಸಂ. | ವಿವರ ಯಾವ ವರ್ಗದವರಿಗೆ | ಮೊದಲ 5 ದಿನಗಳಿಗೆ ಒಂದು ಹಾಸಿಗೆ ಕೊಠಡಿಗೆ | 5 ದಿನಗಳ ನಂತರದ ದಿನಗಳಿಗೆ ಒಂದು ಹಾಸಿಗೆ ಕೊಠಡಿ ಬಾಡಿಗೆ | ಹೆಚ್ಚುವರಿ ಒಬ್ಬ ಅತಿಥಿಗಾಗಿ | ಮೊದಲ 5 ದಿನಗಳಿಗೆ ಎರಡು ಹಾಸಿಗೆಯ ಒಂದು ಕೊಠಡಿ ಬಾಡಿಗೆ | 5 ದಿನಗಳ ನಂತರ ಎರಡು ಹಾಸಿಗೆಯ ಒಂದು ಕೊಠಡಿಯ ಬಾಡಿಗೆ | ಹೆಚ್ಚುವರಿ ಹಾಸಿಗೆಗೆ |
|---|---|---|---|---|---|---|---|
| 1. | ರಾಜ್ಯದ ಮಾನ್ಯ ಎಂ.ಪಿ. (ಲೋಕಸಭಾ, ರಾಜ್ಯಸಭಾ ಸದಸ್ಯರು) ಎಂ.ಎಲ್.ಎ. ಹಾಗೂ ಎಂ.ಎಲ್.ಸಿ | ಪ್ರತಿ ದಿನಕ್ಕೆ ರೂ.75.00 | ಪ್ರತಿ ದಿನಕ್ಕೆ ರೂ.100.00 | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.150.00 | ಪ್ರತಿ ದಿನಕ್ಕೆ ರೂ.175.00 | ರೂ.50.00 |
| 2. | a) ರಾಜ್ಯದ ಮಾಜಿ ಎಂ.ಎಲ್.ಎ ಮತ್ತು ಎಂ.ಎಲ್.ಸಿ | ಪ್ರತಿ ದಿನಕ್ಕೆ ರೂ.100.00 | ಪ್ರತಿ ದಿನಕ್ಕೆ ರೂ.125.00 | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.200.00 | ಪ್ರತಿ ದಿನಕ್ಕೆ ರೂ.225.00 | ರೂ.50.00 |
| | b) ರಾಜ್ಯದ ಮಾಜಿ ಎಂ.ಪಿ. (ಲೋಕಸಭಾ ಮತ್ತು ರಾಜ್ಯಸಭಾ ಸದಸ್ಯರು) | ಪ್ರತಿ ದಿನಕ್ಕೆ ರೂ.100.00 | ಪ್ರತಿ ದಿನಕ್ಕೆ ರೂ.125.00 | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.200.00 | ಪ್ರತಿ ದಿನಕ್ಕೆ ರೂ.225.00 | ರೂ.50.00 |
| 3. | a) ಹೊರ ರಾಜ್ಯದ ಹಾಲಿ ಎಂ.ಪಿ. ಎಂ.ಎಲ್.ಎ ಹಾಗೂ ಎಂ.ಎಲ್.ಸಿ | ಪ್ರತಿ ದಿನಕ್ಕೆ ರೂ.125.00 | ಪ್ರತಿ ದಿನಕ್ಕೆ ರೂ.150.00 | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.250.00 | ಪ್ರತಿ ದಿನಕ್ಕೆ ರೂ.275.00 | ರೂ.50.00 |
| | b) ಹೊರ ರಾಜ್ಯದ ಮಾಜಿ ಎಂ.ಪಿ., ಎಂ.ಎಲ್.ಎ. ಹಾಗೂ ಎಂ.ಎಲ್.ಸಿ | ಪ್ರತಿ ದಿನಕ್ಕೆ ರೂ.125.00 | ಪ್ರತಿ ದಿನಕ್ಕೆ ರೂ.150.00 | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.250.00 | ಪ್ರತಿ ದಿನಕ್ಕೆ ರೂ.275.00 | ರೂ.50.00 |
| 4. | ಕೆಲಸದ ಮೇಲೆ ಬರುವ ಸರ್ಕಾರಿ ನೌಕರರಿಗೆ ಮತ್ತು ಅಧಿಕಾರಿಗಳಿಗೆ | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.75.00 | ಪ್ರತಿ ದಿನಕ್ಕೆ ರೂ.40.00 | ಪ್ರತಿ ದಿನಕ್ಕೆ ರೂ.100.00 | ಪ್ರತಿ ದಿನಕ್ಕೆ ರೂ.125.00 | ರೂ.40.00 |
| 5. | ಖಾಸಗಿ ವ್ಯಕ್ತಿಗಳಿಗೆ | ಪ್ರತಿ ದಿನಕ್ಕೆ ರೂ.125.00 | ಪ್ರತಿ ದಿನಕ್ಕೆ ರೂ.150.00 | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.250.00 | ಪ್ರತಿ ದಿನಕ್ಕೆ ರೂ.275.00 | ರೂ.50.00 |
| 6. | ಮಾನ್ಯ ಸ್ವಾತಂತ್ರ್ಯ ಯೋಧರಿಗೆ | ಪ್ರತಿ ದಿನಕ್ಕೆ ರೂ.50.00 | ಪ್ರತಿ ದಿನಕ್ಕೆ ರೂ.75.00 | ಪ್ರತಿ ದಿನಕ್ಕೆ ರೂ.40.00 | ಪ್ರತಿ ದಿನಕ್ಕೆ ರೂ.100.00 | ಪ್ರತಿ ದಿನಕ್ಕೆ ರೂ.125.00 | ಪ್ರತಿ ದಿನಕ್ಕೆ ರೂ.40.00 |

ಈ ಆದೇಶವನ್ನು ಲೋಕೋಪಯೋಗಿ ಇಲಾಖೆ (ಆರ್ಥಿಕ ಕೋಶ) ಇವರ ಟಿಪ್ಪಣಿ ಸಂಖ್ಯೆ: ಲೋಇ 389 ಆಕೋ-111/2003, ದಿನಾಂಕ:31.7.2003 ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಈ ಆದೇಶಕ್ಕೆ ಲಗತ್ತಿಸಿರುವ ನಿಬಂಧನೆಗಳು ಮತ್ತು ಷರತ್ತುಗಳು ಸಹಾ ಚಾಲ್ತಿಯಲ್ಲಿರುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ ನರಸಿಂಹಲು**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಕಟ್ಟಡಗಳು)

**ಸರ್ಕಾರದ ಆದೇಶ ಸಂಖ್ಯೆ: ಲೋಇ 34 ಬಿಟಿಐ 2001, ಬೆಂಗಳೂರು, ದಿನಾಂಕ: 14-8-2003ಕ್ಕೆ ನಿಬಂಧನೆಗಳು ಮತ್ತು ಷರತ್ತುಗಳು.**

1) ಸರ್ಕಾರಿ ಅಧಿಕಾರಿಗಳು ಸರ್ಕಾರಿ ಕೆಲಸದ ನಿಮಿತ್ತ ಬಂದರೆ ಅವರಿಗೆ ಮೂರು ದಿನಗಳು ಮಾತ್ರ ತಂಗಲು ಅವಕಾಶವಿದೆ.

2) ಸಾರ್ವಜನಿಕರಿಗೆ ಮುಂಗಡ ಹಣ ಕಟ್ಟಿಸಿಕೊಂಡು ಕಾವೇರಿ ಅತಿಥಿಗೃಹದಲ್ಲಿ ಕೊಠಡಿಯನ್ನು ಕಾಯ್ದಿರಿಸಲು ಕ್ರಮ ತೆಗೆದುಕೊಳ್ಳುವುದು.

3) ಸರ್ಕಾರಿ ಅಧಿಕಾರಿಗಳು ಸರ್ಕಾರಿ ಕೆಲಸದ ಮೇರೆಗೆ ಅತಿಥಿಗೃಹದಲ್ಲಿ ತಂಗಲು ಅರ್ಜಿ ನೀಡುವಾಗ ಅವರ ಮೇಲಾಧಿಕಾರಿಗಳಿಂದ ಹಿಂಬರಹ ಹಾಗೂ ಅತಿಥಿಗೃಹದಲ್ಲಿ ವಾಸ್ತವ್ಯವನ್ನು ಬಯಸುವವರು ಅರ್ಜಿಯಲ್ಲಿ ಅವರ ಹೆಸರು, ಹುದ್ದೆ ಮತ್ತು ಕಛೇರಿಯ ಹೆಸರು ನಮೂದಿಸತಕ್ಕದ್ದು.

4) ಕರ್ತವ್ಯದ ಮೇಲೆ ವಾಸ್ತವ್ಯ ಮಾಡುವ ಸರ್ಕಾರಿ ಅಧಿಕಾರಿಗಳಿಗೆ ಗರಿಷ್ಟ 5 ದಿನಗಳವರೆಗೆ ಸಾಮಾನ್ಯ ಬಾಡಿಗೆಯನ್ನು ನಂತರ ಮೊದಲ ಮೂರು ದಿನಗಳಿಗೆ ಸಾಮಾನ್ಯ ಬಾಡಿಗೆಯ 3 ಪಟ್ಟು ದಂಡ ಬಾಡಿಗೆ ತದನಂತರದ ದಿನಗಳಿಗೆ ಸಾಮಾನ್ಯ ಬಾಡಿಗೆಯ 10 ರಷ್ಟು ದಂಡ ಬಾಡಿಗೆ ವಿಧಿಸತಕ್ಕದ್ದು.

5) ಒಂದು ಕೇಂದ್ರ ಸ್ಥಾನದಿಂದ ಮತ್ತೊಂದು ಕೇಂದ್ರ ಸ್ಥಾನಕ್ಕೆ ವರ್ಗವಾಗಿರುವ ಸರ್ಕಾರಿ ಅಧಿಕಾರಿಗಳಿಗೆ ಗರಿಷ್ಟ 5 ದಿನಗಳವರೆಗೆ ಅತಿಥಿಗೃಹವನ್ನು ಕಾಯ್ದಿರಿಸಬಹುದು.

6) ಶಾಸಕರು ಹಾಗೂ ಸಂಸದರು ತಂಗುವಾಗ ಅವರಿಗೆ ಮತ್ತು ಅವರ ಸಿಬ್ಬಂದಿ ವರ್ಗದವರಿಗೆ ಪರಿಷ್ಕೃತ ಆದೇಶದಲ್ಲಿ ನಿಗದಿಪಡಿಸಿರುವಂತೆ ಬಾಡಿಗೆಯನ್ನು ನಿಗದಿಪಡಿಸುವುದು.

7) ಕೊಠಡಿ ಬಾಡಿಗೆ ದರದಲ್ಲಿ ಊಟ ಉಪಚಾರದ ವೆಚ್ಚ ಒಳಗೊಂಡಿರುವುದಿಲ್ಲ. ಈ ವೆಚ್ಚವನ್ನು ಪ್ರತ್ಯೇಕವಾಗಿ ಬಾಡಿಗೆದಾರರೇ ಭರಿಸಿಕೊಳ್ಳತಕ್ಕದ್ದು.

8) ಕೊಠಡಿಗಳಿಗೆ ದೂರವಾಣಿ ಸೌಲಭ್ಯವನ್ನು ಉಚಿತವಾಗಿ ಒದಗಿಸುವುದಿಲ್ಲ.

9) ಕೊಠಡಿಗಳಲ್ಲಿರುವ ಅನುಕೂಲತೆಗೆ ತಕ್ಕಂತೆ ತಂಗುವವರ ಸಂಖ್ಯೆಯನ್ನು ಸೀಮಿತಗೊಳಿಸಲಾಗುವುದು.

10) ದಿನದ ಬಾಡಿಗೆಯನ್ನು ಆಯಾ ದಿನವೇ ಪಾವತಿಸತಕ್ಕದ್ದು.

11) ಕೊಠಡಿಗಳನ್ನು ತಂಗಲು ಪಡೆದವರು ಕಾಲಮಿತಿಯಿಲ್ಲದೆ ದಿನದ ಸಂಪೂರ್ಣ ಬಾಡಿಗೆಯನ್ನು ಪಾವತಿಸತಕ್ಕದ್ದು.

12) ಸರ್ಕಾರದ ಆಸ್ತಿಪಾಸ್ತಿಗೆ ನಷ್ಟ ಉಂಟು ಮಾಡಿದಲ್ಲಿ ವಾಸಿಗರೇ ಭರಿಸಬೇಕು.

**ಎಂ.ಕೆ ನರಸಿಂಹಲು**

ಪಿ.ಆರ್. 1076

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಕಟ್ಟಡಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಮುಜಾಮಿಲ್ ರೆಹಮಾನ್, ಸಹಾಯಕ ಶಸ್ತ್ರ ಚಿಕಿತ್ಸಕರು, ಎಸ್.ಡಿ.ಎಸ್. ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ, ಬೆಂಗಳೂರು ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದುದರಿಂದ ಇವರನ್ನು ಸೇವೆಯಿಂದ ವಜಾ ಮಾಡುವ ಬಗ್ಗೆ.

**ಓದಲಾಗಿದೆ:**
1. ಷೋಕಾಸ್ ನೋಟೀಸ್ ಸಂಖ್ಯೆ: ಆಕುಕ 68 ಎಂಎಸ್ಎ 94 ದಿನಾಂಕ: 13/12/1994.
2. ಸರ್ಕಾರದ ಆದೇಶ ಸಂಖ್ಯೆ: ಆಕುಕ 68 ಎಂಎಸ್ಎ 94, ದಿನಾಂಕ: 25/01/1996.
3. ವಿಚಾರಣಾಧಿಕಾರಿ (ವಿಚಾರಣೆ-2) /96-97 ದಿನಾಂಕ: 2/11/1996.
4. ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 68 ಎಂಎಸ್ಎ 94, ದಿನಾಂಕ: 20/11/1996.
5. ಆಪಾದಿತ ವೈದ್ಯರ ರಕ್ಷಣಾ ಹೇಳಿಕೆ ದಿನಾಂಕ: 1/12/1996.
6. ಸರ್ಕಾರದ ಆದೇಶ ಸಂಖ್ಯೆ: ಆಕುಕ 68 ಎಂಎಸ್ಎ 94 ದಿನಾಂಕ: 12/6/1997.
7. ವಿಚಾರಣಾಧಿಕಾರಿ (ವಿಚಾರಣೆ-2) /96-97 ದಿನಾಂಕ: 17/1/1998.
8. ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 68 ಎಂಎಸ್ಎ 94 ದಿನಾಂಕ: 25/5/1998.
9. ಡಾ: ಮುಜಾಮಿಲ್ ಅವರ ರಕ್ಷಣಾ ಹೇಳಿಕೆ ದಿನಾಂಕ: 25/6/1998.
10. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 68 ಎಂಎಸ್ಎ 94 ದಿನಾಂಕ: 3/5/1999 ಮತ್ತು 14/9/1999.
11. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮಡಿಕೇರಿ ಅವರ ಪತ್ರ ಸಂಖ್ಯೆ: ಸಿವಿ (2) 194/2002-03 ದಿನಾಂಕ: 9/1/03.

**ಪ್ರಸ್ತಾವನೆ:**

ಡಾ: ಮುಜಾಮಿಲ್ ರೆಹಮಾನ್, ಸಹಾಯಕ ಶಸ್ತ್ರಚಿಕಿತ್ಸಕರು, ಎಸ್.ಡಿ.ಎಸ್.ಕ್ಷಯ ಮತ್ತು ಎದೆ ರೋಗಗಳ ಆಸ್ಪತ್ರೆ, ಬೆಂಗಳೂರು ಇವರು ದಿನಾಂಕ: 4.6.1993 ರಿಂದ 2.8.1993 ರವರೆಗೆ ವೈದ್ಯಕೀಯ ಆಧಾರದ ಮೇಲೆ ತೆರಳಿ. ಈ ರಜೆ ಮುಗಿದ ನಂತರ ಸೇವೆಗೆ ಹಾಜರಾಗದೆ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾದುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ, ನಿಯಮ-11 ರಡಿಯಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಪತ್ರದ ಮೂಲಕ ಆರೋಪಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ಕೋರಲಾಗಿತ್ತು. ಆದರೆ ಆಪಾದಿತ ವೈದ್ಯರು ನಿಗದಿತ ಅವಧಿ ಮುಗಿದರೂ ಯಾವ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿಲ್ಲವಾದ್ದರಿಂದ ಈ ಪ್ರಕರಣವನು ಇಲಾಖಾ ವಿಚಾರಣೆಗೆ ವಹಿಸಲು ತೀರ್ಮಾನಿಸಿ ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಿ ವಿಚಾರಣೆ ನಡೆಸಿ ವಿಚಾರಣಾ ವರದಿ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಪತ್ರದ ಮೂಲಕ ವಿಚಾರಣಾಧಿಕಾರಿಯವರು ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದು ಆಪಾದಿತ ವೈದ್ಯಾಧಿಕಾರಿಯ ಮೇಲೆ ಮಾಡಲಾದ ಆಪಾದನೆಯು ಭಾಗಶಃ ಸಾಬೀತಾಗಿದೆ ಎಂಬ ನಿರ್ಣಯಕ್ಕೆ ಬಂದಿದ್ದರು. ಸದರಿ ವಿಚಾರಣಾ ವರದಿಯನ್ನು ಮೇಲೆ (4) ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಪಾದಿತ ವೈದ್ಯಾಧಿಕಾರಿಗೆ ಜಾರಿ ಮಾಡಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ವಿವರಣೆ ಕೋರಲಾಗಿತ್ತು. ಅದರಂತೆ ಮೇಲೆ (5) ರಲ್ಲಿ ಓದಲಾದ ವೈದ್ಯರ ಪ್ರತಿ ರಕ್ಷಣಾ ಹೇಳಿಕೆಯಲ್ಲಿ ವಿಚಾರಣಾ ವರದಿಯಲ್ಲಿಯ ನಿರ್ಣಯವನ್ನು ಒಪ್ಪಿಕೊಂಡಿರುತ್ತಾರೆ. ಮೇಲೆ (6) ರಲ್ಲಿ ಓದಲಾದ ಆದೇಶದಲ್ಲಿ ವಿಚಾರಣಾಧಿಕಾರಿಗಳು ಸಲ್ಲಿಸಲಾದ ವಿಚಾರಣಾ ವರದಿಯಲ್ಲಿ ವಿಚಾರಣೆಯು ಪರಿಪೂರ್ಣವಾಗಿರದೆ ನಿರ್ಣಯವು ಪಕ್ಷಪಾತ ರಹಿತವಾಗಿದ್ದಂತೆ ಕಂಡು ಬರುವುದಿಲ್ಲವೆಂಬ ಅಂಶಗಳನ್ನು ಸರ್ಕಾರವು ಗಮನಿಸಿ ಪುನಃ ವಿಚಾರಣೆ ಮಾಡಲು ವಿಚಾರಣಾಧಿಕಾರಿಗಳಾದ ಆರೋಗ್ಯ ಮತ್ತು ಕು.ಕ.ಸೇವೆಗಳ ನಿರ್ದೇಶನಾಲಯದ ವಿಶೇಷಾಧಿಕಾರಿ (ಕಾಕೋ) ರವರಿಗೆ ಹಿಂತಿರುಗಿ ಆದೇಶಿಸಿದೆ. ಮೇಲೆ (7) ರಲ್ಲಿ ಓದಲಾದ ಪತ್ರದ ಮೂಲಕ ನಿಯಮಾನುಸಾರ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದು, ಆಪಾದಿತ ವೈದ್ಯಾಧಿಕಾರಿಯ ಮೇಲೆ ಮಾಡಲಾದ ಅನಧಿಕೃತ

ಗೈರುಹಾಜರಿಯ ಆಪಾದನೆ ಭಾಗಶಃ ಸಾಬೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿರುತ್ತಾರೆ. ಸದರಿ ವಿಚಾರಣಾ ವರದಿಯನ್ನು ಮೇಲೆ (8) ರಲ್ಲಿ ಓದಲಾದ ತಿಳುವಳಿಕೆ ಪತ್ರದ ಮೂಲಕ ಆಪಾದಿತ ವೈದ್ಯಾಧಿಕಾರಿಗೆ ಎರಡನೇ ಬಾರಿ ಜಾರಿ ಮಾಡಿ ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಮತ್ತೊಮ್ಮೆ ವಿವರಣೆ ಕೋರಲಾಗಿತ್ತು. ಆರೋಪಿತ ವೈದ್ಯಾಧಿಕಾರಿಯು ಮೇಲೆ (9) ರಲ್ಲಿ ಓದಲಾದ ಪತ್ರದ ಮೂಲಕ ಪ್ರತಿ ರಕ್ಷಣಾ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಅವರ ರಕ್ಷಣಾ ಹೇಳಿಕೆಯನ್ನು ವೈದ್ಯಕೀಯ ಕಾರಣಗಳ ಮೇಲೆ ದಿನಾಂಕ: 4.6.1993 ರಿಂದ 2.8.1993ರ ವರೆಗೆ ರಜೆ ಅರ್ಜಿ ಸಲ್ಲಿಸಿದ್ದು ನಂತರ ರಜೆ ವಿಸ್ತರಿಸಿರುವುದಾಗಿ ತಿಳಿಸಿ, ಸರ್ಕಾರಿ ಸೇವೆಗೆ ಪುನರ್ ನೇಮಕ ಮಾಡಲು ಕೋರಿದ್ದರು. ಅವರ ಹೇಳಿಕೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳಿಗೆ ಪೂರಕವಾಗಿ ಯಾವುದೇ ವೈದ್ಯಕೀಯ ದಾಖಲಾತಿಗಳನ್ನಾಗಲೀ. ಇತರೆ ದಾಖಲೆಗಳನ್ನಾಗಲಿ ಒದಗಿಸಿರುವುದಿಲ್ಲ. ಮತ್ತು ಅವರ ಹೇಳಿಕೆಯಲ್ಲಿ ಪರಿಗಣಿಸುವಂತಹ ಯಾವುದೇ ಅಂಶಗಳಿಲ್ಲ. ಆದಾಗ್ಯೂ ಸರ್ಕಾರ ಅವರ ಮನವಿಯನ್ನು ಪರಿಗಣಿಸಿ. ಶಿಸ್ತುಕ್ರಮ ಬಾಕಿ ಇರಿಸಿ. ಮೇಲೆ ಓದಲಾದ (10)ರ ಸರ್ಕಾರದ ಅಧಿಸೂಚನೆಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ ಆಸ್ಪತ್ರೆ, ಜೋಗ್, ಶಿವಮೊಗ್ಗ ಜಿಲ್ಲೆ ಇಲ್ಲಿಗೆ ಶಿಸ್ತುಕ್ರಮ ಬಾಕಿ ಇರಿಸಿ, ನೇಮಕಾತಿ ಮಾಡಲಾಗಿದ್ದು, ಅಲ್ಲಿ ಹುದ್ದೆ ಖಾಲಿ ಇಲ್ಲದ ಪ್ರಯುಕ್ತ ವರ್ಗಾವಣೆ ಆದೇಶವನ್ನು ಮಾರ್ಪಡಿಸಿ. ದಿನಾಂಕ: 14.9.1999ರ ಸರ್ಕಾರದ ಅಧಿಸೂಚನೆಯಲ್ಲಿ ಜಿಲ್ಲಾ ಆಸ್ಪತ್ರೆ, ಮಡಿಕೇರಿ ಇಲ್ಲಿಗೆ ವರ್ಗಾಯಿಸಿ ನೇಮಿಸಲಾಗಿತ್ತು. ಆದರೆ ಸದರಿ ವೈದ್ಯರು ನೇಮಕಾತಿ ಮಾಡಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಪುನಃ ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಾಗಿರುವರು. ಈ ಸಂಬಂಧವಾಗಿ ಸದರಿ ವೈದ್ಯರಿಗೆ ದಿನಾಂಕ: 16.5.2003 ರಂದು ಪತ್ರ ಬರೆದು ನೇಮಿಸಿದ ಸ್ಥಳದಲ್ಲಿ ಯಾಕೆ ಹಾಜರಾಗಿಲ್ಲ. ಎಂಬುದರ ಬಗ್ಗೆ ವಿವರಣೆಯನ್ನು 3 ದಿನಗಳೊಳಗಾಗಿ ನೀಡುವಂತೆ ಕೋರಿದ್ದರಿಂದ ಅವರ ತಂದೆಯವರಾದ ಶ್ರೀ ಎಂ.ಎ. ಖಾದೀರ್‌ರವರು ದಿನಾಂಕ: 24.5.2003 ರಂದು ಪತ್ರ ಬರೆದು ತಮ್ಮ ಮಗ ಡಾ: ಮುಜಾಮಿಲ್ ರೆಹಮಾನ್ ರವರು ಭಾರತ ದೇಶದಲ್ಲಿ ಇರುವುದಿಲ್ಲವೆಂದು ತಿಳಿಸಿರುವರು.

ಸರ್ಕಾರವು ವಿಚಾರಣಾಧಿಕಾರಿಗಳ ವಿಚಾರಣಾ ವರದಿಯನ್ನು ಸಂಬಂಧಿಸಿರುವ ದಾಖಲಾತಿಗಳನ್ನು ಹಾಗೂ ವೈದ್ಯರ ಹೇಳಿಕೆಗಳನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಡಾ: ಮುಜಾಮಿಲ್ ರೆಹಮಾನ್, ಸಹಾಯಕ ಶಸ್ತ್ರ ಚಿಕಿತ್ಸಕರು, ಎಸ್.ಡಿ.ಎಸ್.ಟಿ.ಬಿ. ಮತ್ತು ಎದೆ ರೋಗಗಳ ಆಸ್ಪತ್ರೆ, ಹಳೆ ಮದ್ರಾಸ್ ರಸ್ತೆ, ಬೆಂಗಳೂರು ಇವರು ದಿನಾಂಕ: 4.6.1993 ರಿಂದ 2.8.1993ರ ವರೆಗೆ ರಜೆ ಅರ್ಜಿ ಸಲ್ಲಿಸಿ, ರಜೆ ಮುಗಿದ ನಂತರ ಸರ್ಕಾರಿ ಸೇವೆಗೆ ಹಾಜರಾಗದೆ ಅನಧಿಕೃತ ಗೈರುಹಾಜರಾಗಿರುತ್ತಾರೆ. ನಂತರ ದಿನಾಂಕ: 30.10.1993 ರಂದು ಕರ್ತವ್ಯಕ್ಕೆ ಹಾಜರಾಗಲು ಮರುಕರೆ ನೋಟೀಸ್‌ನ್ನು ಕಳುಹಿಸಿದರೂ ಸಹ ಯಾವುದೇ ಪ್ರತಿಕ್ರಿಯೆ ವೈದ್ಯರಿಂದ ಸ್ವೀಕರಿಸಲಾಗಿಲ್ಲ. ಅದಲ್ಲದೆ, ಅವರ ಕೋರಿಕೆಯಂತೆ ಶಿಸ್ತುಕ್ರಮ ಬಾಕಿ ಇರಿಸಿ ಸರ್ಕಾರಿ ಸೇವೆಗೆ ಪುನರ್ ನೇಮಕ ಮಾಡಿದರೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಆಪಾದಿತ ವೈದ್ಯರ ತಂದೆಯವರಾದ ಶ್ರೀ ಎಂ.ಎ. ಖಾದೀರ್ ಅವರು ದಿನಾಂಕ: 24.5.2003 ರಂದು ಸರ್ಕಾರಕ್ಕೆ ಪತ್ರ ಬರೆದು ತಮ್ಮ ಮಗನಾದ ಡಾ: ಮುಜಾಮಿಲ್ ರೆಹಮಾನ್ ರವರು ಸದ್ಯ ಭಾರತದೇಶದಲ್ಲಿಲ್ಲವೆಂದು ತಿಳಿಸಿರುವರು. ಆದುದರಿಂದ ಅವರ ಈ ವರ್ತನೆಯು ಸರ್ಕಾರಿ ಸೇವೆಯಲ್ಲಿ ಮುಂದುವರೆಯುವ ಇಚ್ಛೆ ಇಲ್ಲವೆಂಬುದನ್ನು ಸಂಪೂರ್ಣವಾಗಿ ಸಾಬೀತುಪಡಿಸುತ್ತದೆ. ಇದರಿಂದ ಸರ್ಕಾರವು ಅವರ ಈ ವರ್ತನೆಯನ್ನು ಗಂಭೀರವಾಗಿ ಪರಿಗಣಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು, 1957ರ ನಿಯಮ 8 (viii) ರನ್ವಯ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಲು ಸರ್ಕಾರವು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಆಕುಕ 68 ಎಂಎಸ್‌ಎ 94 ಬೆಂಗಳೂರು, ದಿನಾಂಕ: 28ನೇ ಜುಲೈ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8 (viii) ರಲ್ಲಿ ಪ್ರದತ್ತವಾದ ಅಧಿಕಾರಗಳನ್ನು ಚಲಾಯಿಸಿ, ಡಾ: ಮುಜಾಮಿಲ್ ರೆಹಮಾನ್, ಸಹಾಯಕ ಶಸ್ತ್ರಚಿಕಿತ್ಸಕರು, ಎಸ್.ಡಿ.ಎಸ್.ಟಿ.ಬಿ. ಮತ್ತು ಎದೆ ರೋಗಗಳ ಆಸ್ಪತ್ರೆ, ಹಳೆ ಮದ್ರಾಸ್ ರಸ್ತೆ, ಬೆಂಗಳೂರು ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಕೆ. ತೆಗ್ಗಿನಮನಿ**

ಪಿ.ಆರ್. 1077 ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಹೇಮಾಜಿನಾಯಕ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ರಂಗೇಗೌಡ ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧದ ಜಂಟಿ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ:** ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರದ ಕ್ರಮಾಂಕ:ಕಂಪ್ಲೇಂಟ್:ಉಪಲೋಕ್: ಎಂವೈಎಸ್-4:2000-01:ಎಆರ್‌ಎಲ್‌ಓ-4, ದಿನಾಂಕ: 5-2-2003.

**ಪ್ರಸ್ತಾವನೆ:**

ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ ಅವರು ಮೇಲೆ ಓದಲಾದ ದಿನಾಂಕ:5.2.2003 ರ ತಮ್ಮ ಪತ್ರದಲ್ಲಿ ಸನ್ಮಾನ್ಯ ಲೋಕಾಯುಕ್ತರು ದಿನಾಂಕ: 28.1.2003 ರಂದು ಸರ್ಕಾರಕ್ಕೆ ಮಾಡಿದ ಶಿಫಾರಸ್ಸಿನ ಪ್ರತಿಯನ್ನು ಕಳುಹಿಸಿದ್ದಾರೆ. ಹಾಸನ ಜಿಲ್ಲೆ ಹೊಳೆ ನರಸೀಪುರ ತಾಲ್ಲೂಕು ಹೇಮಾವತಿ ನೀರಾವರಿ ಯೋಜನೆಯ ವಿಶೇಷ ಭೂ ಸ್ವಾಧೀನಾಧಿಕಾರಿ ಆಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೇಮಾಜಿನಾಯಕ್, ಕೆಎಎಸ್ ಅಧಿಕಾರಿ ಹಾಗೂ ಅವರ ಕಛೇರಿಯಲ್ಲಿ ಕಂದಾಯ ನಿರೀಕ್ಷಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ರಂಗೇಗೌಡ ಅವರು ಹೊಳೆನರಸೀಪುರ ತಾಲ್ಲೂಕು ಗುಲಗಂಜಿ ಹಳ್ಳಿ, ಗ್ರಾಮದ ವಾಸಿ ಶ್ರೀ ಕಾಳೇಗೌಡ ಬಿನ್ ಪಾಪೇಗೌಡ, ಉರುಫ್ ಮರೀಗೌಡ ಇವರ ತಂದೆಯ ಹೆಸರಿನಲ್ಲಿರುವ ಗುಲಗಂಜಿ ಹಳ್ಳಿ ಗ್ರಾಮದ ಸರ್ವೆ ನಂ:170:9 ರಲ್ಲಿನ 3 ಎಕರೆ 2 ಗುಂಟೆ ಜಮೀನಿನ ಪೈಕಿ

19 ಗುಂಟೆ ಜಮೀನನ್ನು ಹೇಮಾವತಿ ಬಲದಂಡೆ ಕಾಲುವೆ ನಿರ್ಮಾಣಕ್ಕಾಗಿ ವಶಪಡಿಸಿಕೊಂಡ ಸಂಬಂಧ ಪರಿಹಾರಧನ ಪಾವತಿ ಮಾಡಲು ಅಕ್ರಮ ಸಂಭಾವನೆ ಪಡೆಯುವಾಗಲೇ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಶ್ರೀ ಬಿ. ರಂಗೇಗೌಡ, ಕಂದಾಯ ನಿರೀಕ್ಷಕರು ಸಿಕ್ಕಿಬಿದ್ದ ಅನಂತರ ನಡೆದ ತನಿಖೆಯಲ್ಲಿ ಅವರುಗಳು ಎಸಗಿದ ಆರೋಪಗಳು ಮೇಲ್ನೋಟಕ್ಕೆ ನಿಜವಿರುವುದಾಗಿ ಕಂಡುಬಂದಿದ್ದರಿಂದ ಅವರುಗಳ ವಿರುದ್ಧ ಕಠಿಣ ದಂಡನೆ ವಿಧಿಸುವ ವಿಧಿ-ವಿಧಾನಗಳಿಗೆ ಅಳವಡಿಸಿ ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ನಡೆಸುವಂತೆ ಸನ್ಮಾನ್ಯ ಲೋಕಾಯುಕ್ತರು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸನ್ನು ಪರಿಶೀಲಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಕ್ರಮಾಂಕ:ಸಿಆಸುಇ 61 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14-ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಹೇಮಾಜಿ ನಾಯಕ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ಬಿ. ರಂಗೇಗೌಡ, ಕಂದಾಯ ನಿರೀಕ್ಷಕರು ಅವರುಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ಸನ್ಮಾನ್ಯ ಲೋಕಾಯುಕ್ತರ ಮೂಲಕ ವಿಚಾರಣೆ ನಡೆಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1079

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3)

**ವಿಷಯ:** ಸರ್ಕಾರದ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಗುರುತಿಸುವ ಸಲುವಾಗಿ ಸಚಿವಾಲಯದಲ್ಲಿ ಒಂದು ರೀ-ಡಿಪ್ಲಾಯ್‌ಮೆಂಟ್ ಸೆಲ್ ಅನ್ನು ಸೃಜಿಸುವ ಬಗೆಗೆ - ಆದೇಶ.

**ಪ್ರಸ್ತಾವನೆ:**

ಸರ್ಕಾರದ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಗುರುತಿಸಿ, ಇತರೆ ಇಲಾಖೆಗಳಲ್ಲಿ ಖಾಲಿ ಇರುವ ಹುದ್ದೆಗಳಿಗೆ ವರ್ಗಾಯಿಸುವ ಬಗ್ಗೆ ಪರಿಶೀಲಿಸಲು, ಸಚಿವಾಲಯದ ಮಟ್ಟದಲ್ಲಿ ಒಂದು ರೀ-ಡಿಪ್ಲಾಯ್‌ಮೆಂಟ್ ಸೆಲ್ ಅನ್ನು ಸರ್ಕಾರದ ಅಪರ ಕಾರ್ಯದರ್ಶಿ (ಸೇವಾ ನಿಯಮಗಳು) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ನೇತೃತ್ವದಲ್ಲಿ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಸೃಜಿಸಬೇಕೆಂಬ ಪ್ರಸ್ತಾವನೆಯನ್ನು ದಿನಾಂಕ: 17.1.2003 ರಂದು ಅಪರ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಂಡಿಸಲಾಗಿರುತ್ತದೆ.

1. ಅಧೀನ ಕಾರ್ಯದರ್ಶಿ ಒಂದು ಹುದ್ದೆ
2. ಶಾಖಾಧಿಕಾರಿ ಒಂದು ಹುದ್ದೆ
3. ಸಹಾಯಕ ಒಂದು ಹುದ್ದೆ

ಹಾಗೂ ಈ ಹುದ್ದೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ವಿಭಾಗದ ಈ ಕೆಳಕಂಡ ಹುದ್ದೆಗಳನ್ನು ವರ್ಗಾಯಿಸುವ ಮೂಲಕ ಭರ್ತಿ ಮಾಡುವಂತೆಯೂ ಸಹ ತೀರ್ಮಾನಿಸಲಾಗಿರುತ್ತದೆ.

1. ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ-2)
2. ಶಾಖಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ).
3. ಸಹಾಯಕ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ).

ಆದುದರಿಂದ, ಈ ಪ್ರಸ್ತಾವನೆ ಕೂಲಂಕಷವಾಗಿ ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶಿಸಲಾಗಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 73 ಸಸಿವಿ 2003, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2003**

ಸರ್ಕಾರದ ವಿವಿಧ ಇಲಾಖೆಗಳಲ್ಲಿ ಲಭ್ಯವಿರುವ ಹೆಚ್ಚುವರಿ ಹುದ್ದೆಗಳನ್ನು ಗುರುತಿಸುವ ಸಲುವಾಗಿ, ಸಚಿವಾಲಯದ ಮಟ್ಟದಲ್ಲಿ, ಸರ್ಕಾರದಲ್ಲಿ ಅಪರ ಕಾರ್ಯದರ್ಶಿ (ಸೇವಾ ನಿಯಮಗಳು) ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಇವರ ನೇತೃತ್ವದಲ್ಲಿ ಒಂದು ರೀ-ಡಿಪ್ಲಾಯ್‌ಮೆಂಟ್ ಸೆಲ್ ಅನ್ನು ಈ ಕೆಳಕಂಡ ಹುದ್ದೆಗಳೊಂದಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಸೃಜಿಸಲು ಮಂಜೂರಾತಿ ನೀಡಲಾಗಿದೆ.

1. ಅಧೀನ ಕಾರ್ಯದರ್ಶಿ ಒಂದು ಹುದ್ದೆ
2. ಶಾಖಾಧಿಕಾರಿ ಒಂದು ಹುದ್ದೆ
3. ಸಹಾಯಕ ಒಂದು ಹುದ್ದೆ

ಹಾಗೂ ಈ ಹುದ್ದೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಆಡಳಿತ ಸುಧಾರಣೆ) ವಿಭಾಗದ ಈ ಕೆಳಕಂಡ ಹುದ್ದೆಗಳನ್ನು ವರ್ಗಾಯಿಸುವ ಮೂಲಕ ಭರ್ತಿ ಮಾಡುವಂತೆಯೂ ಸಹ ಆದೇಶಿಸಲಾಗಿದೆ.

1. ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ-2)
2. ಶಾಖಾಧಿಕಾರಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ).
3. ಸಹಾಯಕ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಾಧ್ಯಯನ).

ಈ ಆದೇಶವನ್ನು, ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 808 ಸೇ-03, ದಿನಾಂಕ: 20.6.2003 ರಲ್ಲಿ ನೀಡಿರುವ ಸಹಮತಿಯ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1080

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ತಿದ್ದುಪಡಿ

### ಸಂಖ್ಯೆ: ಸಿಆಸುಇ 144 ಸೆಅಸೆ 2003, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2003

ಸರ್ಕಾರಿ ಆದೇಶ ಸಂ: ಸಿಆಸುಇ 144 ಸೆಅಸೆ 2003 ದಿನಾಂಕ: 18.07.2003ರ ಆದೇಶದ ಭಾಗದ ಈಗಿರುವ ಕಂಡಿಕೆ 1 ಮತ್ತು 2ರ ಬದಲು ಈ ಕೆಳಕಂಡ ಕಂಡಿಕೆಗಳನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳು, ಹಾಗೂ ಸಂದರ್ಭಗಳ ಹಿನ್ನೆಲೆಯಲ್ಲಿ ಈ ಕೆಳಕಂಡ ಉದ್ದೇಶಗಳಿಗೆ ಒಟ್ಟಾರೆ, ರೂ. 19.25 ಲಕ್ಷ ಗಳನ್ನು (ಹತ್ತೊಂಬತ್ತು ಲಕ್ಷ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ) ಅಭಿವೃದ್ಧಿ ಆಯುಕ್ತರು, ಉತ್ತರ ಕರ್ನಾಟಕ, ಬೆಳಗಾವಿ, ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

(ಲಕ್ಷ ರೂಪಾಯಿಗಳಲ್ಲಿ)

| | | |
|---|---|---|
| 1. | ಹೊಸ ವಾಹನ ಖರೀದಿಗೆ | 6.25 |
| 2. | ಎರಡು ವಾಹನಗಳ ನಿರ್ವಹಣೆಗೆ | 3.00 |
| 3. | ದೂರವಾಣಿ, ಕಚೇರಿ ವೆಚ್ಚ ಹಾಗೂ ಸಾಮಾನ್ಯ ವೆಚ್ಚಗಳಿಗೆ | 10.00 |
| | **ಒಟ್ಟು** | **19.25** |

ಮೇಲೆ ತಿಳಿಸಿದ ಮೊತ್ತ ರೂ. 19.25 ಲಕ್ಷಗಳನ್ನು ಮುಂಬರುವ ಪೂರಕ ಅಂದಾಜಿನಲ್ಲಿ ಸೇರಿಸಲು ಕ್ರಮ ತೆಗೆದುಕೊಳ್ಳಲಾಗಿದ್ದು ಈ ಅನುದಾನಕ್ಕೆ ವಿಧಾನ ಮಂಡಲದ ಮಂಜೂರಾತಿ ದೊರೆತ ನಂತರ ವೆಚ್ಚ ಮಾಡತಕ್ಕದ್ದು."

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ವಿ. ಕುಮಾರಸ್ವಾಮಿ**

ಪಿ.ಆರ್. 1081

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-1)

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಕಾರಾಗೃಹಗಳ ಇಲಾಖೆಯಲ್ಲಿನ ಜೈಲರ್ ಹುದ್ದೆಗೆ ನೇಮಕಾತಿ ಮಾಡಲು - ಇಲಾಖಾ ನೇಮಕಾತಿ ಸಮಿತಿ ರಚಿಸುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಇ4: ಸಿಆರ್-92 2002, ದಿನಾಂಕ: 29-3-2003 ಹಾಗೂ 6-6-2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 29-3-2003ರ ಪತ್ರದಲ್ಲಿ ಕಾರಾಗೃಹಗಳ ಇಲಾಖೆಯಲ್ಲಿ ಜೈಲರ್ ಪಾತ್ರ ಅತ್ಯಂತ ಮಹತ್ವದಾಗಿದ್ದು, ಕಾರ್ಯನಿರ್ವಾಹಕ ಸಿಬ್ಬಂದಿಗಳಾದ ಚೀಫ್ ವಾರ್ಡರ್, ಹೆಡ್‌ವಾರ್ಡರ್, ಹಾಗೂ ವಾರ್ಡರ್‌ರ ಉಸ್ತುವಾರಿಯನ್ನು ನೋಡಿಕೊಳ್ಳುವುದರ ಜೊತೆಗೆ ಕಾರಾಗೃಹಗಳ ಅಧೀಕ್ಷಕರಿಗೆ ಸಹಾಯಕರಾಗಿ ಕಾರ್ಯನಿರ್ವಹಿಸಬೇಕಾಗಿದೆ. ಕಾರಾಗೃಹದ ಆಡಳಿತ, ಬಂದಿಗಳ ಭದ್ರತೆ, ರಕ್ಷಣೆ, ಬಂದಿಗಳ ವೃತ್ತಿ ತರಬೇತಿ, ಮನಪರಿವರ್ತನೆ ಕಾರ್ಯಗಳಿಗೆ ಇವರ ಸೇವೆ ಅವಶ್ಯಕ ಹಾಗೂ ತಾಲ್ಲೂಕು ಉಪ ಕಾರಾಗೃಹಗಳಲ್ಲಿ ಜೈಲರ್‌ರೇ ಕಛೇರಿ ಮುಖ್ಯಸ್ಥರಾಗಿ ಕರ್ತವ್ಯ ನಿರ್ವಹಿಸಬೇಕಾಗಿರುತ್ತದೆ. ಆದುದರಿಂದ ತಾಲ್ಲೂಕು ಉಪ ಕಾರಾಗೃಹದಲ್ಲಿ ಜೈಲರ್ ಹುದ್ದೆಗಳನ್ನು ಖಾಲಿ ಬಿಟ್ಟಲ್ಲಿ, ಮುಖ್ಯಸ್ಥರೇ ಇಲ್ಲದೆ ಆಡಳಿತ, ಭದ್ರತೆ ರಕ್ಷಣೆ ವಿಷಯಗಳಲ್ಲಿ ತೊಂದರೆಯನ್ನು ಎದುರಿಸುವ ಪರಿಸ್ಥಿತಿ ಉದ್ಭವಿಸುತ್ತದೆ. ಆದ್ದರಿಂದ ಖಾಲಿ ಇರುವ ಜೈಲರ್ ಹುದ್ದೆಗಳನ್ನು ಇಲಾಖಾ ವೃಂದ ಮತ್ತು ನೇಮಕಾತಿ ನಿಯಮಗಳು 2002ರ ಪ್ರಕಾರ ನೇರನೇಮಕಾತಿ ಪ್ರಾಧಿಕಾರದ ಮೂಲಕ ತುಂಬಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಇಲಾಖಾ ನೇಮಕಾತಿ ಸಮಿತಿಯನ್ನು ರಚಿಸಿ ಆದೇಶ ಹೊರಡಿಸಬೇಕೆಂದು ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರು ಕೋರಿದ್ದಾರೆ.

| | | | |
|---|---|---|---|
| 1) | ಸರ್ಕಾರವು ನಾಮನಿರ್ದೇಶನ ಮಾಡಲ್ಪಡುವ ಕಾರಾಗೃಹಗಳ ಮಹಾ ನಿರೀಕ್ಷಕರು ಅಥವಾ ಈ ದರ್ಜೆಗೆ ಸಮಾನರಾದ ಅಧಿಕಾರಿ | - | ಅಧ್ಯಕ್ಷರು |
| 2) | ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಅಥವಾ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ನಾಮನಿರ್ದೇಶನ ಹೊಂದಿದ ಅಧಿಕಾರಿ | - | ಸದಸ್ಯರು |
| 3) | ನಿರ್ದೇಶಕರು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ ಅಥವಾ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ನಾಮನಿರ್ದೇಶನ ಹೊಂದಿದ ಅಧಿಕಾರಿ. | - | ಸದಸ್ಯರು |
| 4) | ಸರ್ಕಾರವು ನಾಮನಿರ್ದೇಶನ ಮಾಡಲ್ಪಡುವ ಕರ್ನಾಟಕ ರಾಜ್ಯದ ವಿಶ್ವವಿದ್ಯಾಲಯದ ಸಮಾಜಶಾಸ್ತ್ರ, ಮನಃಶಾಸ್ತ್ರ, ಅಪರಾದಶಾಸ್ತ್ರ, ಅಥವಾ ತಿದ್ದುಪಡಿ ಆಡಳಿತ ವಿಷಯದಲ್ಲಿ ಬೋಧಿಸುವ ಪ್ರೊಫೆಸರ್ : ರೀಡರ್ | - | ಸದಸ್ಯರು |
| 5) | ಸರ್ಕಾರವು ನಾಮನಿರ್ದೇಶನ ಮಾಡಲ್ಪಡುವ ಕಾರಾಗೃಹಗಳ ಉಪ ಮಹಾ ನಿರೀಕ್ಷಕರು (ಕೇಂದ್ರ ಕಾರ್ಯಸ್ಥಾನ) | - | ಸದಸ್ಯ ಕಾರ್ಯದರ್ಶಿ |

ಹಾಗೂ ದಿನಾಂಕ:6.6.2003ರ ಪತ್ರದಲ್ಲಿ ಇಲಾಖಾ ನೇಮಕಾತಿ ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿ ಶ್ರೀ ಎನ್. ಜಯರಾಮಯ್ಯ, ಕಾರಾಗೃಹಗಳ ಉಪ ಮಹಾ ನಿರೀಕ್ಷಕರವರನ್ನು ನಾಮನಿರ್ದೇಶನ ಮಾಡುವಂತೆ ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 58 ಪಿಆರ್‌ಇ 2003, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2003**

ಕಾರಾಗೃಹಗಳ ಇಲಾಖೆಯಲ್ಲಿ ಖಾಲಿ ಇರುವ ಜೈಲರ್ ಹುದ್ದೆಗಳನ್ನು ಇಲಾಖಾ ವೃಂದ ಹಾಗೂ ನೇಮಕಾತಿ ನಿಯಮಗಳನ್ವಯ ಭರ್ತಿ ಮಾಡಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡಂತೆ ಇಲಾಖಾ ನೇಮಕಾತಿ ಸಮಿತಿಯನ್ನು ರಚಿಸಲಾಗಿದೆ.

1) ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು. - ಅಧ್ಯಕ್ಷರು
2) ನಿರ್ದೇಶಕರು, ಸಮಾಜ ಕಲ್ಯಾಣ ಇಲಾಖೆ ಅಥವಾ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ನಾಮನಿರ್ದೇಶನ ಹೊಂದಿದ ಅಧಿಕಾರಿ - ಸದಸ್ಯರು
3) ನಿರ್ದೇಶಕರು, ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಇಲಾಖೆ ಅಥವಾ ಜಂಟಿ ನಿರ್ದೇಶಕರ ದರ್ಜೆಗೆ ಕಡಿಮೆ ಇಲ್ಲದ ನಾಮನಿರ್ದೇಶನ ಹೊಂದಿದ ಅಧಿಕಾರಿ. - ಸದಸ್ಯರು
4) ಡಾ: ಸುಧಾ ಭೋಗಲೆ ರೀಡರ್, ಮನಃಶಾಸ್ತ್ರ ವಿಭಾಗ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. - ಸದಸ್ಯರು
5) ಶ್ರೀ ಬಿ.ಎಸ್. ಅಬ್ಬಾಯಿ, ಕಾರಾಗೃಹಗಳ ಉಪ ಮಹಾ ನಿರೀಕ್ಷಕರು, ಬೆಂಗಳೂರು ಕೇಂದ್ರ ಕಾರಾಗೃಹ, ಬೆಂಗಳೂರು. - ಸದಸ್ಯ ಕಾರ್ಯದರ್ಶಿ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಕೆ. ಗುರಾಣಿ**
ಪಿ.ಆರ್. 1082
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ದಿವಂಗತ ಡಿ.ದೇವರಾಜ ಅರಸು ಪ್ರಶಸ್ತಿಗೆ ಅಭ್ಯರ್ಥಿಯ ಆಯ್ಕೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಕಇ 261 ಬಿಎಂಎಸ್ 2003 ದಿನಾಂಕ:4-7-2003.
2. ಹಿಂದುಳಿದ ವರ್ಗಗಳ ನಿರ್ದೇಶಕರ ಏಕಕಡತ ಟಿಪ್ಪಣಿ ಸಂಖ್ಯೆ ಹಿಂವನಿ:ಸ-2/ಸಿಆರ್-12/2003-04 ದಿನಾಂಕ:4-8-2003.

**ಪ್ರಸ್ತಾವನೆ:**

ಮೇಲೆ ಓದಲಾದ ಉಲ್ಲೇಖಿತ (1)ರಲ್ಲಿನ ಆದೇಶದಲ್ಲಿ ದಿವಂಗತ ಡಿ. ದೇವರಾಜ ಅರಸು ಇವರ 88ನೇ ಜನ್ಮ ದಿನಾಚರಣೆಯನ್ನು ಆಚರಿಸುವ ಸಂದರ್ಭದಲ್ಲಿ ಪ್ರಶಸ್ತಿಯನ್ನು ನೀಡುವುದಕ್ಕಾಗಿ ವ್ಯಕ್ತಿ ಒಬ್ಬರನ್ನು ಶಿಫಾರಸ್ಸು ಮಾಡಲು ಡಾ:ಹೆಚ್. ನರಸಿಂಹಯ್ಯ, ಬೆಂಗಳೂರು ಇವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿನ ಕಡತದಲ್ಲಿ ಹಿಂದುಳಿದ ವರ್ಗಗಳ ನಿರ್ದೇಶಕರು, ಮೇಲೆ ತಿಳಿಸಿದ ಸಮಿತಿಯ ಶಿಫಾರಸ್ಸನ್ನು ರವಾನಿಸಿ, ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 370 ಬಿಎಂಎಸ್ 2003, ಬೆಂಗಳೂರು, ದಿನಾಂಕ: 19ನೇ ಆಗಸ್ಟ್ 2003**

ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಸರ್ಕಾರವು ದಿವಂಗತ ಡಿ. ದೇವರಾಜ ಅರಸುರವರ 2003-04ನೇ ವಾರ್ಷಿಕ ಪ್ರಶಸ್ತಿಗಾಗಿ ಡಾಕ್ಟರ್ ಹೆಚ್. ಸುದರ್ಶನ್, ಬಿಳಿಗಿರಿರಂಗನ ಬೆಟ್ಟಗಳು, ಇವರನ್ನು ಆಯ್ಕೆ ಮಾಡಿ ಆದೇಶಿಸಿದೆ.

ಮುಂದಿನ ಸೂಕ್ತ ಕ್ರಮಗಳನ್ನು ನಿರ್ದೇಶಕರು, ಹಿಂದುಳಿದ ವರ್ಗಗಳ ಇಲಾಖೆ, ಬೆಂಗಳೂರು ಇವರು ಜರುಗಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 1083
**ಡಿ. ಶಿವಕುಮಾರಪ್ಪ**
ಸರ್ಕಾರದ ಉಪ ಕಾರ್ಯದರ್ಶಿ, ಸಮಾಜ ಕಲ್ಯಾಣ ಇಲಾಖೆ.

## RURAL DEVELOPMENT AND PANCHAYAT RAJ SECRETARIAT
## CORRIGENDUM
### No. RDP 44 SJY 2002, Bangalore, Dated: 21st August, 2003

**Sub:** Release of II and Additional instalment of State share (25% of the allocation) to 13 Districts for the year 2002-2003.

In G.O. No. RDP 44 SJY 2002, Bangalore Dtd: 23-07-2003 Read the expenditure on the schemes is debitable to the Head of Account as:

2501 - Spl. Programmes for Rural Development
01 - Integrated Rural Development Programmes
196 - Assistance to Zilla Panchayats
1 - Zilla Panchayats - 07 Swarna Jayanthi Grama Swarozgar Yojana - 201 - Grant in Aid for ZP - plan 2003-04 (2501-01-196-1-07-201) Instead of

2501- Spl. Programme for Rural Devp. 01-Swarna Jayanthi Grama Swarozgar Yojana (SGSY) 191 Assistance to local bodies and corporation etc-1-Zilla Panchayat and Grama Panchayat 07 subsidy to Zilla Panchayat (Plan) 2003-04 (2501-01-191-1-07)

By Order and in the name of the Governor of Karnataka,
**A.K. MONNAPPA**
Director (SEP), & E/o Joint Secretary to Govt.,
Rural Development & Panchayat Raj Department

P.R. 1084

**FOREST, ECOLOGY AND ENVIRONMENT SECRETARIAT**

**Sub:** Nomination to the Environmental Management And Policy Research Institute (EMPRI) - Reg.

**Preamble:**

The Karnataka State Pollution Control Board (KSPCB) had established Environmental Training Institute (ETI) with technical and financial support from Danida. The project was started in the year 1994 and the original project period was up to 31-3-2000 and the same was extended up to 31-3-2002. As contemplated in the agreement entered into between the Government of India, Government of Karnataka and Government of Denmark, Environmental Training Institute has been fully established with necessary equipment and core technical staff.

The Karnataka State Pollution Control Board in it's 144th Board meeting held on 27-3-2002 has changed the name of the Environmental Training Institute to Environmental Management and Policy Research Institute (EMPRI). A decision was also taken in the meeting to make Environmental Management and Policy Research Institute an autonomous body within a span of 3 years. Consequently, a society was registered on 17-9-2002 under the Karnataka Societies Registration Act, 1960.

However, in order to broad base the functioning of Environmental Management and Policy Research Institute and to involve those departments Which directly benefit and would be in a position to fund the training activities of Environmental Management and Policy Research Institute it is felt expedient that a direction be issued to the Governing body of the Environmental Management and Policy Research Institute to induct Government nominees as members of the society. Hence the order.

**Government Order No. FEE 124 ENV 2003, Bangalore, Dated: 26th July 2003**

In view of the facts mentioned in the preamble and in exercise of the powers conferred under rule 30 of the General Rules of the Rules and Regulation of the Institute, Government hereby nominates the following officers as the Government nominees to the society (EMPRI) in addition to the existing members:

1) Principal Secretary to Government, Forest, Ecology & Environment Department.
2) Principal Secretary to Government, Urban Development Department/Director of Municipal Administration.
3) Secretary to Government (Ecology & Environment), Forest, Ecology & Environment Department.
4) Secretary to Government (Budget) Finance Department.
5) Commissioner for Industrial Development and Director of Industries and Commerce.
6) Commissioner for Health and Family Welfare Services.
7) Zonal Officer, Central Pollution Control Board, Bangalore.

By Order and in the name of the Governor of Karnataka,
**V.R. GAIKWAD**
Under Secretary to Government,
Forest, Ecology and Environment Department.

P.R. 1085

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ತಿದ್ದುಪಡಿ**

**ಸಂಖ್ಯೆ: ಸಿಆಸುಇ 107 ಶಿಸನೇ 2003, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2003**

ಅಧಿಸೂಚನೆ ಸಂಖ್ಯೆ: ಸಿಆಸುಇ 65 ಶಿಸನೇ 2003, ದಿನಾಂಕ 10-6-2003ರ ಮೂರನೇ ಸಾಲಿನಲ್ಲಿ "ಈ ಕೂಡಲೇ" ಎಂದಿರುವ ಪದವನ್ನು "ಅವರು ಸದರಿ ಸ್ಥಾನದ ಕಾರ್ಯಭಾರವನ್ನು ವಹಿಸಿಕೊಂಡ ದಿನಾಂಕದಿಂದ" ಎಂದು ತಿದ್ದುಪಡಿ ಮಾಡಲಾಗಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್. ನಾರಾಯಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ರಾಜ್ಯ ಶಿಷ್ಟಾಚಾರ).

ಪಿ.ಆರ್. 1086

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್.ಎಸ್. ಪೂಜಾರ್, ಕೆ.ಎ.ಎಸ್. ಅಧಿಕಾರಿ ಅವರ ಜಾತಿಯ ಪರಿಶೀಲನೆ - ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಹೆಚ್ಚುವರಿ ಪೊಲೀಸು ಮಹಾನಿರ್ದೇಶಕರು, ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯ, ಅವರ ಪತ್ರ ಕ್ರಮಾಂಕ:ಜಾವಿ:6:ಸಾಮಾನ್ಯ:ನಾಹಜಾನಿ:2000 ದಿನಾಂಕ:19-6-2000.
2. ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು ಜಿಲ್ಲಾ ಜಾತಿ ಪರಿಶೀಲನಾ ಸಮಿತಿ ಗುಲ್ಬರ್ಗಾ ಅವರ ಆದೇಶ ಕ್ರಮಾಂಕ: ಜಿಸಕಗು:ಜಾವಿ:ಸಿಆರ್:120:2002-03:138 ದಿನಾಂಕ: 24-4-2003.
3. ಸಮಾಜ ಕಲ್ಯಾಣ ಇಲಾಖೆಯ ಆದೇಶ ಸಂಖ್ಯೆ:ಸಕಇ 713 ಎಸ್ಎಡಿ 93 ದಿನಾಂಕ: 11-3-2002.

**ಪ್ರಸ್ತಾವನೆ:**

ಶ್ರೀ ಎಸ್.ಎಸ್. ಪೂಜಾರ್, ಕೆ.ಎ.ಎಸ್. ಅಧಿಕಾರಿ ಇವರು ಪರಿಶಿಷ್ಟ ವರ್ಗದ ಕಾಡುಕುರುಬ ಜನಾಂಗಕ್ಕೆ ಸೇರಿದವರೆಂದು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ಪಡೆದು 1986ರ ತಂಡದಲ್ಲಿ ಕೆ.ಎ.ಎಸ್. ಹುದ್ದೆಗೆ ನೇಮಕಗೊಂಡಿದ್ದಾರೆಂದು ಸಲ್ಲಿಸಲ್ಪಟ್ಟ ದೂರಿನ ಮೇರೆಗೆ ನಾಗರೀಕ ಹಕ್ಕು ಜಾರಿ ನಿರ್ದೇಶನಾಲಯವು ತನಿಖೆ ನಡೆಸಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 19-6-2000ರ ಪತ್ರದ ಮೂಲಕ ಜಿಲ್ಲಾ ಜಾತಿ ಪರಿಶೀಲನಾ ಸಮಿತಿ, ಗುಲ್ಬರ್ಗ ಅವರಿಗೆ ವರದಿ ಸಲ್ಲಿಸಿ ಶ್ರೀ ಎಸ್.ಎಸ್. ಪೂಜಾರ್ ಅವರು ಗುಲ್ಬರ್ಗಾ ಮಹಾನಗರ ಸಭೆಯಿಂದ ಸುಳ್ಳುಜಾತಿ ಪರಿಶಿಷ್ಟ ವರ್ಗದ ಕಾಡುಕುರುಬ ಜಾತಿಗೆ ಸೇರಿದವರೆಂದು ಘೋಷಣಾ ಪತ್ರ ನೀಡಿ 1986 ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಕೆ.ಎ.ಎಸ್. ಹುದ್ದೆಗೆ ನೇಮಕಗೊಂಡು ಸರ್ಕಾರಕ್ಕೆ ಮೋಸ ಮಾಡಿರುತ್ತಾರೆ ಎಂದು ತಿಳಿಸಿತು. ಇದರ ಆಧಾರದ ಮೇಲೆ ದಾಖಲಾತಿಗಳು ಹಾಗೂ ಹೇಳಿಕೆಗಳ ಪ್ರಕಾರ ವಿಚಾರಣೆ ಕೈಗೊಂಡ ಜಿಲ್ಲಾಧಿಕಾರಿ, ಹಾಗೂ ಅಧ್ಯಕ್ಷರು ಜಿಲ್ಲಾ ಜಾತಿ ಪರಿಶೀಲನಾ ಸಮಿತಿ ಗುಲ್ಬರ್ಗಾ ಅವರು ಮೇಲೆ (2) ರಲ್ಲಿ ಓದಲಾದ ದಿನಾಂಕ: 24-4-2003ರ ಆದೇಶದಲ್ಲಿ ಶ್ರೀ ಎಸ್.ಎಸ್. ಪೂಜಾರ್ ಅವರ ಶಾಲಾ ದಾಖಲಾತಿಗಳು ಹಾಗೂ ಹೇಳಿಕೆಗಳ ಪ್ರಕಾರ ಕುರುಬ ಉಪಜಾತಿಗೆ ಸೇರಿದವರೆಂದು ತಿಳಿಸಿದ್ದು ಮೇಲೆ (3) ರಲ್ಲಿ ಓದಲಾದ ದಿನಾಂಕ: 11-3-2002ರ ಸರ್ಕಾರಿ ಆದೇಶದ ಪ್ರಕಾರ ಸದರಿ ದಿನಾಂಕದಿಂದ ಜಾರಿಗೆ ಬರುವಂತೆ ಸಾಮಾನ್ಯ ವರ್ಗವೆಂದು ಪರಿಗಣಿಸಿ ಆದೇಶ ಹೊರಡಿಸಿದ್ದಾರೆ. ಈ ಆದೇಶವನ್ನು ಗಮನಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ:ಸಿಆಸುಇ 23 ಎಸ್ಇಎನ್ 2003, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎಸ್.ಎಸ್. ಪೂಜಾರಿ, ಕೆ.ಎ.ಎಸ್. ಅಧಿಕಾರಿಯವರು ದಿನಾಂಕ: 11-3-2002 ರಿಂದ ಜಾರಿಗೆ ಬರುವಂತೆ ಸಾಮಾನ್ಯ ವರ್ಗಕ್ಕೆ ಸೇರಿದವರೆಂದು ಪರಿಗಣಿಸಿ ಈ ಮೂಲಕ ಆದೇಶಿಸುತ್ತದೆ. ದಿನಾಂಕ: 11-3-2002 ರಿಂದ ಅವರು ಸಾಮಾನ್ಯ ವರ್ಗದ ಅಭ್ಯರ್ಥಿಯಾಗಿ ಸೇವಾ ಸೌಲಭ್ಯಗಳಿಗೆ ಅರ್ಹರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 1087

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಶ್ರೀ ಎ. ವೆಂಕಟಭಾಸ್ಕರ ರೆಡ್ಡಿ ಪದವೀಧರ ಇಂಜಿನಿಯರ್ (ಎಂ.ಆರ್ಇ) ಇವರು ದಿನಾಂಕ 10.10.2000ಕ್ಕೆ ದಿನಗೂಲಿ ನೌಕರರಾಗಿ ಹತ್ತು ವರ್ಷಗಳ ಸೇವೆ ಸಲ್ಲಿಸಿರುವುದರಿಂದ ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್ಎಲ್ಸಿ:94, ದಿನಾಂಕ: 29.9.94.
2. ಸರ್ಕಾರದ ಆದೇಶ ಸಂಖ್ಯೆ: ಪಿಡಬ್ಲ್ಯುಡಿ:357:ಪಿಡಬ್ಲ್ಯುಸಿ:90, ದಿನಾಂಕ: 2.12.94.
3. ಸರ್ಕಾರದ ಪತ್ರ ಸಂಖ್ಯೆ: ಪಿಡಬ್ಲ್ಯುಡಿ:201:ಪಿಡಬ್ಲ್ಯುಸಿ:95, ದಿನಾಂಕ: 2.7.94, 1.9.95, 13.9.95.
4. ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬಿಎಸ್-185:ಇಎಸ್ಎಂ:ದಿನೌಸೇ: 2002-03: ದಿ: 15.2.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶದಲ್ಲಿ ಸರ್ವೋಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ: 737:90, 738:90, 1038:90 ಮತ್ತು 297:91 ರಲ್ಲಿ ನೀಡಿರುವ ಆದೇಶದನ್ವಯ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮೊದಲು ದಿನಗೂಲಿಯಲ್ಲಿ ನೇಮಕ ಹೊಂದಿದ ಪದವೀಧರ ಮತ್ತು ಡಿಪ್ಲೋಮಾ ಇಂಜಿನಿಯರ್‌ರನ್ನು ಹಲವು ಷರತ್ತುಗಳಿಗೆ ಒಳಪಟ್ಟಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಲು ಆದೇಶಿಸಿದೆ.

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಸಿ.ಆ.ಸು.ಇಲಾಖೆಯ ಆದೇಶಾನುಸಾರ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ 15.10.92ಕ್ಕೆ ಮುಂಚೆ ನೇಮಕ ಹೊಂದಿದ ಪದವೀಧರ ಹಾಗೂ ಡಿಪ್ಲೋಮಾ ಇಂಜಿನಿಯರ್‌ರನ್ನು ದಿನಾಂಕ: 29.9.94ರಿಂದ ಜಾರಿಗೆ ಬರುವಂತೆ ಮಾಸಿಕ ವೇತನ ವ್ಯವಸ್ಥೆಗೆ ಒಳಪಡಿಸಿ ಆದೇಶವನ್ನು ಹೊರಡಿಸಲಾಗಿದೆ. ದಿನಾಂಕ 29.9.94ರ ಆದೇಶದಲ್ಲಿನ ಕಂಡಿಕೆ 6 ಮತ್ತು 7 ರಲ್ಲಿ ದಿನಗೂಲಿ ಸೇವೆಯಲ್ಲಿ 10 ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸಲು ಸಹ ಆದೇಶಿಸಲಾಗಿದೆ. ಪದವೀಧರ ಇಂಜಿನಿಯರರಿಗೆ ಸಂಬಂಧಿಸಿದಂತೆ ಸರ್ಕಾರದ ವತಿಯಿಂದಲೂ ಹಾಗೂ ಡಿಪ್ಲೋಮಾ ಇಂಜಿನಿಯರ್‌ರಿಗೆ ಸಂಬಂಧಿಸಿದಂತೆ ಆಯಾ ಮುಖ್ಯ ಇಂಜಿನಿಯರ್‌ರವರು ಸೂಕ್ತಕ್ರಮ ತೆಗೆದುಕೊಳ್ಳುವಂತೆ ನಿರ್ದೇಶಿಸಲಾಗಿದೆ.

ಕ್ರಮ ಸಂಖ್ಯೆ: (3) ರಲ್ಲಿ ಓದಲಾದ ಪತ್ರಗಳಲ್ಲಿ ಹತ್ತು ವರ್ಷಗಳ ಸತತ ಸೇವೆ ಸಲ್ಲಿಸಿದ ದಿನಗೂಲಿ ಅಭಿಯಂತರರನ್ನು ಕ್ರಮಬದ್ಧಗೊಳಿಸುವ ಸಲುವಾಗಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಗಳ ಎಲ್ಲಾ ಮುಖ್ಯ ಇಂಜಿನಿಯರ್‌ಗಳನ್ನು ಕೋರಲಾಗಿದೆ.

ಅದರಂತೆ ಕ್ರಮ ಸಂಖ್ಯೆ: (4) ರಲ್ಲಿ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಿಂದ ಸ್ವೀಕೃತವಾದ ಪ್ರಸ್ತಾವನೆಯನ್ನು ಪರಿಶೀಲಿಸಿ ಸಿ.ಆ.ಸು.ಇಲಾಖೆಯ ಸಂಖ್ಯೆ: ಡಿಪಿಎಆರ್:13:ಎಸ್‌ಎಲ್‌ಸಿ 94 ದಿನಾಂಕ 29.9.94 ಹಾಗೂ ಪಿಡಬ್ಲ್ಯುಡಿ 357:ಪಿಡಬ್ಲ್ಯುಸಿ 90 ದಿನಾಂಕ 2.12.94ರ ಆದೇಶದನ್ವಯ ಮಾಸಿಕ ವೇತನದಡಿಯಲ್ಲಿ ಕೆಲಸ ಮಾಡುತ್ತಿರುವ ಸಹಾಯಕ ಇಂಜಿನಿಯರ್‌ರನ್ನು ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲು ನಿರ್ಧರಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಆದೇಶ**

**ಸರ್ಕಾರಿ ಆದೇಶ ಸಂಖ್ಯೆ: ಲೋಇ 19 ಪಿಡಬ್ಲ್ಯುಸಿ 2003, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಲೋಕೋಪಯೋಗಿ ಇಲಾಖೆಗಳಲ್ಲಿ ದಿನಾಂಕ 1.7.84ರ ನಂತರ ಹಾಗೂ 15.10.92ಕ್ಕೆ ಮುಂಚಿ ದಿನಗೂಲಿ ಆಧಾರದ ಮೇಲೆ ನೇಮಕಗೊಂಡು ಮಾಸಿಕ ವೇತನ ವ್ಯವಸ್ಥೆಯಡಿಯಲ್ಲಿ ಕೆಲಸ ನಿರ್ವಹಿಸುತ್ತಿರುವ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94 ಹಾಗೂ ಪಿಡಬ್ಲ್ಯುಡಿ:357:ಪಿಡಬ್ಲ್ಯುಸಿ:90 ದಿನಾಂಕ 2.12.94ರ ಆದೇಶಗಳಲ್ಲಿ ವಿಧಿಸಿರುವ ಷರತ್ತುಗಳನ್ನು ಪೂರೈಸಿದ ಈ ಕೆಳಕಂಡ ಪದವೀಧರ ಇಂಜಿನಿಯರ್‌ರನ್ನು ಅವರ ಮುಂದೆ ಸೂಚಿಸಲಾಗಿರುವ ದಿನಾಂಕದಿಂದ ಸಕ್ರಮ ಸೇವೆಯಲ್ಲಿ ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ಹೆಸರು | ದಿನಗೂಲಿಗೆ ಸೇರಿದ ದಿನಾಂಕ | 10 ವರ್ಷ ಸೇವೆ ಪೂರೈಸಿದ ದಿನಾಂಕ | ಕ್ರಮಬದ್ಧ ಗೊಂಡ ದಿನಾಂಕ | ಕಾರ್ಯನಿರ್ವಹಿಸುತ್ತಿರುವ ಸ್ಥಳ |
|---|---|---|---|---|---|
| 1. | ಶ್ರೀ ಎ. ವೆಂಕಟ ಭಾಸ್ಕರ ರೆಡ್ಡಿ, ಪದವೀಧರ ಇಂಜಿನಿಯರ್ | 11.10.1990 | 10.10.2000 | 11.10.2000 | ಲೋಇ ಉಪ ವಿಭಾಗ, ಪಾವಗಡ. |

ಸದರಿ ನೌಕರರಿಗೆ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯ ಹಾಗೂ ಸೇವಾ ಹಿರಿತನವನ್ನು ನೀಡಲು ಪರಿಗಣಿಸತಕ್ಕದ್ದು.

ಸಕ್ರಮ ಸೇವೆಯಲ್ಲಿ ವಿಲೀನಗೊಂಡ ನಂತರ ಮೇಲ್ಕಂಡ ಸಹಾಯಕ ಇಂಜಿನಿಯರ್‌ರನ್ನು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರ ವಶಕ್ಕೆ ನೀಡಿ ಮುಂದಿನ ಸ್ಥಳ ನಿಯುಕ್ತಿ ಆದೇಶ ನೀಡಲು ಕ್ರಮ ತೆಗೆದುಕೊಳ್ಳುವಂತೆ ಆದೇಶಿಸಿದೆ. ಇವರು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಲ್ಲಿ ಕಾರ್ಯವರದಿ ಮಾಡುವುದು.

ಈ ಆದೇಶವನ್ನು ಸಿಆಸುಇ:13:ಎಸ್‌ಎಲ್‌ಸಿ:94 ದಿನಾಂಕ: 29.9.94ರ ಆದೇಶದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪಿ.ಆರ್. 1088

ಪೀಠಾಧಿಕಾರಿ,

ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

**ಶಿಕ್ಷಣ ಸಚಿವಾಲಯ**

**ವಿಷಯ:** ಮಂಗಳೂರು ಕರ್ನಾಟಕ ಪಾಲಿಟೆಕ್ನಿಕ್‌ನ ಯಾಂತ್ರಿಕ ವಿಭಾಗದ ಉಪನ್ಯಾಸಕ : ವಿಭಾಗಾಧಿಕಾರಿ ಶ್ರೀ ಹೆಚ್. ವೀರಭದ್ರಯ್ಯ ರವರ ವಿರುದ್ಧ ಇಲಾಖಾ ವಿಚಾರಣೆ - ಆದೇಶ.

**ಓದಲಾಗಿದೆ:**

1. ದಿನಾಂಕ: 31-12-98 ಸಂಖ್ಯೆ: ಡಿಟಿಇ 51 ಇಎಸ್‌ಟಿ (1) ಬಿ 95 ಡಿಇಕ್ಯೂ (1) ರ ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ.
2. ದಿನಾಂಕ: 02-03-99 ಸಂಖ್ಯೆ: ಇಡಿ 13 ಡಿಟಿಇ 99ರ ಅಧಿಸೂಚನೆ
3. ದಿನಾಂಕ: 03-07-99 ಸಂಖ್ಯೆ: ಇಡಿ 13 ಡಿಟಿಇ 99ರ ಅಧಿಸೂಚನೆ
4. ದಿನಾಂಕ: 05-07-99ರ ನೋಟೀಸ್
5. ದಿನಾಂಕ: 20-07-99ರ ಶ್ರೀ ಹೆಚ್. ವೀರಭದ್ರಯ್ಯ ನವರ ಲಿಖಿತ ಹೇಳಿಕೆ.
6. ದಿನಾಂಕ: 11-11-2002ರ ಸರ್ಕಾರಿ ಆದೇಶ.
7. ದಿನಾಂಕ: 20-07-2003 ರ ವಿಚಾರಣಾಧಿಕಾರಿಯವರ ವರದಿ.
8. ದಿನಾಂಕ: 01-06-2003ರ ಶ್ರೀ ಹೆಚ್. ವೀರಭದ್ರಯ್ಯ ನವರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಭದ್ರಾವತಿಯ ವಿ.ಐ.ಎಸ್.ಎಸ್.ಜೆ ಸರ್ಕಾರಿ ಪಾಲಿಟೆಕ್ನಿಕ್‌ನಲ್ಲಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್. ವೀರಭದ್ರಯ್ಯ ರವರು ವಿದ್ಯಾರ್ಥಿಗಳ ಹಾಜರಾತಿಯನ್ನು ತಿದ್ದಿ ಪರೀಕ್ಷೆ ಬರೆಯಲು ಅನುವು ಮಾಡಿಕೊಟ್ಟಿದ್ದರ ವಿರುದ್ಧ ಶಿಸ್ತಿನ ಕ್ರಮ ಜರುಗಿಸಲು ಮೇಲೆ ಓದಲಾದ (1)ರ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ನಿರ್ದೇಶಕರು ಸರ್ಕಾರವನ್ನು ಕೋರಿದ್ದರು. (ಪುಟ-38)

2. ಮೇಲಿನ ಆರೋಪದ ಹಿನ್ನೆಲೆಯಲ್ಲಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಮೇಲೆ ಓದಲಾದ (2)ರ ಅಧಿಸೂಚನೆಯಲ್ಲಿ ಸದರಿ ಉಪನ್ಯಾಸಕರನ್ನು ಅಮಾನತ್ತಿನಲ್ಲಿಡಲಾಗಿತ್ತು. ಹಾಗೂ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಮೇಲೆ ಓದಲಾದ (3)ರ ಅಧಿಸೂಚನೆಯಲ್ಲಿ ಸೇವೆಯಲ್ಲಿ ಪುನರುತ್ಥಾನಗೊಳಿಸಲಾಗಿತ್ತು.

3. ಅವರ ವಿರುದ್ಧ ದೋಷಾರೋಪಣಾ ಪಟ್ಟಿಯೊಡನೆ ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಹೇಳಿಕೆಯನ್ನು 15 ದಿನಗಳ ಒಳಗಾಗಿ ಸಲ್ಲಿಸಬೇಕೆಂದು ಮೇಲೆ ಓದಲಾದ (4)ರಲ್ಲಿ ಕೋರಲಾಗಿತ್ತು.

4. ಅದರಂತೆ ಮೇಲೆ ಓದಲಾದ (5) ರಲ್ಲಿ ಆರೋಪಿತ ನೌಕರರು ಸಲ್ಲಿಸಿರುವ ಹೇಳಿಕೆಯನ್ನು ಪರಿಶೀಲಿಸಿ ಆರೋಪಗಳನ್ನು ನಿರಾಕರಿಸಿದ್ದರ ಮೇರೆಗೆ ಸಮಗ್ರವಾಗಿ ಇಲಾಖಾ ವಿಚಾರಣೆಯನ್ನು ನಡೆಸಿ ವಿವರವಾದ ವರದಿಯನ್ನು ನೀಡಲು ಮೇಲೆ ಓದಲಾದ (6)ರ ಆದೇಶದಲ್ಲಿ ವಿಚಾರಣಾಧಿಕಾರಿಯವರನ್ನು ನೇಮಿಸಲಾಗಿತ್ತು. ಅದರಂತೆ ಮೇಲೆ ಓದಲಾದ (7) ರಲ್ಲಿ ವಿಚಾರಣಾಧಿಕಾರಿಯವರು ಇಲಾಖಾ ವಿಚಾರಣೆ ಮಾಡಿ ವರದಿ ಸಲ್ಲಿಸಿದ್ದು ವಿಚಾರಣಾ ವರದಿಯಲ್ಲಿ ಈ ಕೆಳಕಂಡ ಆರೋಪಗಳು ಸಾಬೀತಾಗಿವೆ ಎಂದು ತಿಳಿಸಿರುತ್ತಾರೆ.

**ಆಪಾದನೆ-2:** ಲಭ್ಯವಿರುವ ಸಾಕ್ಷ್ಯಗಳ ಪ್ರಕಾರ, ವಿದ್ಯುತ್ ಡಿಪ್ಲೋಮಾ ಕೋರ್ಸು ಮೊದಲನೇ ವರ್ಷದ ವಿದ್ಯಾರ್ಥಿಗಳಾಗಿರುವ ಜೆ. ಬಲರಾಮನ್ ಹಾಗೂ ಜೆ. ದೀಪಕ್ ಎಂಬ ವಿದ್ಯಾರ್ಥಿಗಳಿಗೆ Elements of Mechanical Engineering ಎಂಬ ವಿಷಯದಲ್ಲಿ ಹಾಜರಾತಿಯನ್ನು ವಿದ್ಯುತ್ ವಿಭಾಗದ ಕ್ರೋಢಿಕೃತ ಹಾಜರಾತಿ ಪುಸ್ತಕಗಳಲ್ಲಿ ತಿದ್ದಿರುವುದು ಕಾಣುತ್ತದೆ. ಈ ತಿದ್ದುಪಡಿಗೆ ಶ್ರೀ ವೀರಭದ್ರಯ್ಯನವರ ಕಿರುಸಹಿ ಮಾತ್ರ ಇರುತ್ತದೆ. ಶ್ರೀ ರಂಗಸ್ವಾಮಿ ಅವರ ಕಿರುಸಹಿ ಇರುವುದಿಲ್ಲ. ಶ್ರೀ ಎಸ್. ರಂಗಸ್ವಾಮಿ ಅವರ ಹೇಳಿಕೆಯಲ್ಲಿ ಈ ತಿದ್ದುಪಡಿಯನ್ನು ಶ್ರೀ ವೀರಭದ್ರಯ್ಯನವರೇ ಮಾಡಿರಬೇಕೆಂದು ಹೇಳಿರುತ್ತಾರೆ. ಅಲ್ಲದೇ ಈ ತಿದ್ದುವಿಕೆಯನ್ನು ಶ್ರೀ ವೀರಭದ್ರಯ್ಯನವರೇ ತಮ್ಮ ಸಮ್ಮುಖದಲ್ಲೇ ಮಾಡಿದ್ದಾರೆಂದು ಶ್ರೀ ಪಿ. ಪಾಲಾಕ್ಷನವರು ನೀಡಿದ ಹೇಳಿಕೆಗೆ ಶ್ರೀ ವೀರಭದ್ರಯ್ಯ ನವರು ಉತ್ತರಿಸಿಲ್ಲ. ಈ ತಿದ್ದುಪಡಿಗಳಿಗೆ ಬೇರೆಯಾರದ್ದೂ ಸಹಿ ಇರುವುದಿಲ್ಲ. ಲಭ್ಯವಿರುವ ಸಾಕ್ಷ್ಯಾಧಾರದಿಂದ ಈ ತಿದ್ದುಪಡಿಯನ್ನು ಶ್ರೀ ವೀರಭದ್ರಯ್ಯನವರೇ ಮಾಡಿರುತ್ತಾರೆಂದು ಸಾಬೀತಾಗುತ್ತದೆ.

**ಆಪಾದನೆ-5:** ಶ್ರೀ ಅಥವುರ್ ಸಲೀಂ ಎಂಬ ಮೂರನೇ ವರ್ಷದ ವಿದ್ಯುತ್ ವಿಭಾಗದ ವಿದ್ಯಾರ್ಥಿಯ ಹಾಜರಾತಿಯಲ್ಲಿ Industrial Management ವಿಷಯದಲ್ಲಿ ಮಾಡಿರುವ ತಿದ್ದುಪಡಿಯನ್ನು ಶ್ರೀ ವೀರಭದ್ರಯ್ಯನವರೇ ತಾವು ಬೋಧಿಸುತ್ತಿದ್ದ ವಿಷಯದಲ್ಲಿ ಒಬ್ಬ ವಿದ್ಯಾರ್ಥಿಯ ಹಾಜರಾತಿಯನ್ನು ತಿದ್ದಿದ್ದೇನೆಂದು ಒಪ್ಪಿರುವ ಅಂಶಕ್ಕೆ ಅನ್ವಯಿಸಬಹುದು. ಒಬ್ಬ ಅಸಹಾಯಕ ವಿದ್ಯಾರ್ಥಿಗೆ ಸಹಾಯ ಮಾಡಲು ವಿಶೇಷ ತರಗತಿಗಳನ್ನು ತೆಗೆದುಕೊಂಡಿರುವುದಾಗಿ ಹಾಗೂ ಅದಕ್ಕಾಗಿ ಹಾಜರಾತಿಯನ್ನು ತಿದ್ದಿರುವುದಾಗಿಯು ಶ್ರೀ ವೀರಭದ್ರಯ್ಯ ನವರು ನೀಡಿರುವ ಹೇಳಿಕೆಯು ಸಮಂಜಸವಾಗಿರುವುದಿಲ್ಲ. ಅವರು ತೆಗೆದುಕೊಂಡಿದ್ದೇವೆಂದಿರುವ ವಿಶೇಷ ತರಗತಿಗಳಿಗೆ ಪ್ರಿನ್ಸಿಪಾಲರ ಅನುಮತಿಯಾಗಲಿ ಅಥವಾ ಬೇರೆ ಯಾವ ಸಾಕ್ಷ್ಯವಾಗಲಿ ಇರುವುದಿಲ್ಲ. ಲಭ್ಯವಿರುವ ಸಾಕ್ಷ್ಯಾಧಾರಗಳ ಪ್ರಕಾರ ಶ್ರೀ ವೀರಭದ್ರಯ್ಯ ನವರು ಅಥವುರ್ ಸಲೀಂ ಎಂಬ ವಿದ್ಯಾರ್ಥಿಯ ಹಾಜರಾತಿಯನ್ನು ತಿದ್ದಿದ್ದಾರೆಂದು ಸಾಬೀತಾಗಿದೆ.

ಸದರಿ ವಿಚಾರಣಾ ವರದಿಯನ್ನು ಆರೋಪಿತ ನೌಕರರಿಗೆ ಕಳುಹಿಸಿ ಆ ಬಗ್ಗೆ ಹೇಳುವುದೇನಾದರೂ ಇದ್ದಲ್ಲಿ ಲಿಖಿತ ಹೇಳಿಕೆಯನ್ನು 15 ದಿನಗಳ ಒಳಗಾಗಿ ಸಲ್ಲಿಸಲು ಅವಕಾಶ ಮಾಡಿಕೊಡಲಾಗಿತ್ತು. ಆದರೆ ಮೇಲ್ಕಂಡ ದೋಷಾರೋಪಗಳನ್ನು ಆರೋಪಿತ ನೌಕರರು ಸಂಪೂರ್ಣವಾಗಿ ಅಲ್ಲಗೆಳೆದಿರುತ್ತಾರೆ.

5. ಮೇಲಿನ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 13 ಡಿಟಿಇ 99, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2003**

6. ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ವಿಚಾರಣಾ ವರದಿಯನ್ನು ಒಪ್ಪಿ ಮಂಗಳೂರಿನ ಕರ್ನಾಟಕ ಪಾಲಿಟೆಕ್ನಿಕ್‌ನ ಉಪನ್ಯಾಸಕ : ವಿಭಾಗಾಧಿಕಾರಿ ಶ್ರೀ ಹೆಚ್. ವೀರಭದ್ರಯ್ಯ ರವರಿಗೆ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಾವಳಿಯ ನಿಯಮ 8(iii) ರನ್ವಯ ಒಂದು ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಬೀರುವಂತೆ (with cumulative effect) ತಡೆಹಿಡಿಯುವ ದಂಡನೆಯನ್ನು ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1089

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

**ವಿಷಯ:** ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ, ನಿವೃತ್ತ, ಪ್ರಾಂಶುಪಾಲರು, ಸರ್ಕಾರಿ ಮಹಿಳಾ ಪಾಲಿಟೆಕ್ನಿಕ್, ಬೆಂಗಳೂರು ಮತ್ತು ಶ್ರೀ ಎಸ್.ಜಿ. ಬಸವಮುನಿಯಪ್ಪ, ಪ್ರಥಮ ದರ್ಜೆ ಸಹಾಯಕರು ಇವರ ವಿರುದ್ಧ ಇಲಾಖಾ ವಿಚಾರಣೆ - ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 19-08-95 ಸಂಖ್ಯೆ: ಇಡಿ 92 ಡಿಟಿಇ 95ರ ಸರ್ಕಾರಿ ಆದೇಶ
2. ದಿನಾಂಕ: 06-11-95 ಸಂಖ್ಯೆ: ಇಡಿ 92 ಡಿಟಿಇ 95ರ ನೋಟೀಸ್
3. ದಿನಾಂಕ: 18-11-95 ರ ಶ್ರೀ ಶಾಂತಕುಮಾರ ಶೆಟ್ಟಿ ರವರ ಹೇಳಿಕೆ
4. ದಿನಾಂಕ: 11-01-96ರ ಸರ್ಕಾರಿ ಆದೇಶ
5. ದಿನಾಂಕ: 17-09-96 ಸಂಖ್ಯೆ: ಡಿಸಿಇ 64 ಎಡಿಪಿಎಸ್ 95ರ ಕಾಲೇಜು ಶಿಕ್ಷಣ ಅಪರ ನಿರ್ದೇಶಕರ ಪತ್ರ
6. ದಿನಾಂಕ: 20-03-2000 ಸಂಖ್ಯೆ: Compt / Uplok / BCD 165 / 98-99: ARE 5 ರ ಕರ್ನಾಟಕ ಲೋಕಾಯುಕ್ತದ ಪತ್ರ
7. ದಿನಾಂಕ: 03-04-2001ರ ಸರ್ಕಾರಿ ಆದೇಶ

8. ದಿನಾಂಕ: 07-01-2002ರ ಸರ್ಕಾರಿ ಆದೇಶ
9. ದಿನಾಂಕ: 21-08-2002ರ ವಿಚಾರಣಾಧಿಕಾರಿಯವರ ವಿಚಾರಣಾ ವರದಿ
10. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ರವರ ಪತ್ರ ಸಂಖ್ಯೆ: ಪಿಎಸ್‌ಸಿ-126-ಸಿಎನ್‌ಎಸ್-2002 ದಿನಾಂಕ:24.06.2003.

**ಪ್ರಸ್ತಾವನೆ:**

1993ನೇ ಸಾಲಿನಲ್ಲಿ ವೃತ್ತಿಪರ ಕೋರ್ಸುಗಳ ಪ್ರವೇಶಾತಿಯಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷಾ ಘಟಕದಿಂದ ವಿದ್ಯಾರ್ಥಿಗಳಿಗೆ ಸುಳ್ಳು ರ್‍ಯಾಂಕುಗಳನ್ನು ನೀಡಿ ಅವರುಗಳಿಗೆ ಪ್ರವೇಶವನ್ನು ಪಡೆಯಲು ಅನುಕೂಲ ಮಾಡಿಕೊಟ್ಟಿದ್ದರೆಂಬ ದೋಷಾರೋಪದ ಮೇರೆಗೆ ಆಗ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ ಹಾಗೂ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ ರವರುಗಳ ವಿರುದ್ಧ ತನಿಖೆಯನ್ನು ನಡೆಸಲು ಮೇಲೆ ಓದಲಾದ (1) ಸರ್ಕಾರಿ ಆದೇಶದಲ್ಲಿ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲಾಗಿತ್ತು.

2) ಸದರಿಯವರ ವಿರುದ್ಧ ನಿಯಮಾನುಸಾರ ಇಲಾಖೆಯ ವತಿಯಿಂದ ಇಲಾಖಾ ವಿಚಾರಣೆಯನ್ನು ನಡೆಸಲು ಮೇಲೆ (2) ರಲ್ಲಿ ಆಪಾದಿತ ನೌಕರರುಗಳಿಗೆ ನೋಟಿಸ್ಸನ್ನು ಜಾರಿಮಾಡಲಾಗಿತ್ತು. ಹಾಗೂ ಸದರಿ ನೋಟಿಸ್ಸಿಗೆ ಲಿಖಿತ ಮೂಲಕ ಮೇಲೆ ಓದಲಾದ (3) ರಲ್ಲಿ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ ರವರು ಸಲ್ಲಿಸಿದ್ದರು. ಅವರುಗಳು ಸಲ್ಲಿಸಿದ್ದ ಹೇಳಿಕೆಯು ಸಮಂಜಸವಾಗಿಲ್ಲದ ಪ್ರಯುಕ್ತ ಇಲಾಖಾ ವಿಚಾರಣೆ ನಡೆಸಲು ಕಾಲೇಜು ಶಿಕ್ಷಣ ಅಪರ ನಿರ್ದೇಶಕರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿ ಮೇಲೆ ಓದಲಾದ (4) ರಲ್ಲಿ ಆದೇಶಿಸಲಾಗಿತ್ತು.

3) ದಾಖಲೆಗಳು ಲೋಕಾಯುಕ್ತದ ವಶದಲ್ಲಿ ಇರುವುದರಿಂದ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ಮೇಲೆ ಓದಲಾದ (5) ರಲ್ಲಿ ವಿಚಾರಣಾಧಿಕಾರಿಗಳು ವರದಿಯನ್ನು ಸಲ್ಲಿಸಿದ್ದರು. ಈ ಮಧ್ಯೆ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಿದ್ದ ಮೇರೆಗೆ ಲೋಕಾಯುಕ್ತವು ಸಮಗ್ರವಾಗಿ ತನಿಖೆಯನ್ನು ನಡೆಸಿ ಸುಳ್ಳು ರ್‍ಯಾಂಕುಗಳನ್ನು ನೀಡಿ ವಿದ್ಯಾರ್ಥಿಗಳಿಗೆ ಪ್ರವೇಶ ಪಡೆಯಲು ಅನುಕೂಲ ಮಾಡಿಕೊಟ್ಟಿರುವುದು ದೃಢಪಟ್ಟಿದೆ ಎಂದು ಮೇಲೆ ಓದಲಾದ (6) ರಲ್ಲಿ ಲೋಕಾಯುಕ್ತವು ವರದಿಯನ್ನು ಸಲ್ಲಿಸಿದೆ.

4) ಪ್ರಕರಣವನ್ನು ಮತ್ತೊಮ್ಮೆ ವಿಚಾರಣೆ ನಡೆಸಲು ಕಾಲೇಜು ಶಿಕ್ಷಣ ಅಪರ ನಿರ್ದೇಶಕರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ (7) ರಲ್ಲಿ ನೇಮಿಸಲಾಗಿತ್ತು. ಈ ಮಧ್ಯೆ ಕೆಲಸದ ಒತ್ತಡ ಹೆಚ್ಚಾಗಿರುವುದರಿಂದ ವಿಚಾರಣೆಯನ್ನು ನಡೆಸಲು ಸಾಧ್ಯವಾಗುವುದಿಲ್ಲವೆಂದು ಕಾಲೇಜು ಶಿಕ್ಷಣ ಅಪರ ನಿರ್ದೇಶಕರು (ಪುಟ-139) ತಿಳಿಸಿದ್ದರ ಹಿನ್ನೆಲೆಯಲ್ಲಿ ಪ್ರಕರಣವನ್ನು ಸಮಗ್ರವಾಗಿ ಹಾಗೂ ನಿಯಮಾನುಸಾರ ಕಟ್ಟು ನಿಟ್ಟಾಗಿ ವಿಚಾರಣೆಯನ್ನು ನಡೆಸಿ ಗರಿಷ್ಠ ಮೂರು ತಿಂಗಳಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ನಿವೃತ್ತ ನ್ಯಾಯಾಧೀಶರಾದ ಶ್ರೀ ಟಿ.ಜೆ. ಮರಿಯಪ್ಪ ರವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ (8) ಸರ್ಕಾರಿ ಆದೇಶದಲ್ಲಿ ನೇಮಿಸಲಾಗಿತ್ತು.

5) ವಿಚಾರಣಾಧಿಕಾರಿಯವರು ನಿಯಮಾನುಸಾರ ವಿಚಾರಣೆಯನ್ನು ನಡೆಸಿ 1993ನೇ ಸಾಲಿನ ಸಾಮಾನ್ಯ ಪ್ರವೇಶ ಪರೀಕ್ಷೆಗಳಲ್ಲಿ ಸುಳ್ಳು ರ್‍ಯಾಂಕ್‌ಗಳನ್ನು ನೀಡಿ ಪ್ರವೇಶ ಪಡೆಯಲು ಪ್ರಮಾಣ ಪತ್ರಗಳನ್ನು ನೀಡಿರುವುದು ಸಾಬೀತಾಗಿದೆಯೆಂದು ಹಾಗೂ ಇಬ್ಬರು ಆಪಾದಿತ ನೌಕರರುಗಳು ಭಾಗಿಯಾಗಿದ್ದಾರೆಂದು ವಿಚಾರಣಾಧಿಕಾರಿಗಳು ಮೇಲೆ ಓದಲಾದ (9)ರಲ್ಲಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದಾರೆ.

6) ವಿಚಾರಣಾ ವರದಿಯನ್ನು ಸಮಗ್ರವಾಗಿ ಪರಿಶೀಲಿಸಿ ಆಪಾದಿತರಾದ ಶ್ರೀ ಹೆಚ್.ಆರ್. ಶಾಂತಕುಮಾರ್‌ಶೆಟ್ಟಿ, ಪ್ರಾಂಶುಪಾಲರು (ನಿವೃತ್ತ) ಇವರ ಪಿಂಚಣಿಯಲ್ಲಿ ಮಾಸಿಕವಾಗಿ ರೂ.500.00ಗಳನ್ನು ಕಡ್ಡಾಯವಾಗಿ ಕಡಿತಗೊಳಿಸಬೇಕೆನ್ನುವ ಸರ್ಕಾರದ ಪ್ರಸ್ತಾವನೆಗೆ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿ ಕೋರಲಾಗಿದ್ದು, ಇದಕ್ಕೆ ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:24.6.2003ರ ಅವರ ಪತ್ರದಲ್ಲಿ ಸಹಮತಿ ನೀಡಿದೆ.

7) ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 149 ಡಿಟಿಇ 95, ಬೆಂಗಳೂರು, ದಿನಾಂಕ: 18ನೇ ಆಗಸ್ಟ್ 2003**

8) ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಅಂದಿನ ಸಹಾಯಕ ನಿರ್ದೇಶಕರಾಗಿದ್ದ ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ (ಈಗ ನಿವೃತ್ತರು) ಹಾಗೂ ಆಗಿನ ಪ್ರಥಮ ದರ್ಜೆ ಸಹಾಯಕರಾಗಿದ್ದ ಶ್ರೀ ಎಸ್.ಜಿ. ಬಸವಮುನಿಯಪ್ಪ ರವರುಗಳ ವಿರುದ್ಧ 1993ನೇ ಸಾಲಿನ ವೃತ್ತಿಪರ ಕೋರ್ಸುಗಳ ಪ್ರವೇಶದಲ್ಲಿ ಸಾಮಾನ್ಯ ಪ್ರವೇಶ ಪರೀಕ್ಷೆಗಳಲ್ಲಿ ಸುಳ್ಳು ರ್‍ಯಾಂಕುಗಳನ್ನು ನೀಡಿ ವಿದ್ಯಾರ್ಥಿಗಳಿಗೆ ಪ್ರವೇಶ ಪಡೆಯಲು ಅನುಕೂಲ ಮಾಡಿಕೊಟ್ಟಿದ್ದರೆಂಬ ದೋಷಾರೋಪ ವಿಚಾರಣಾ ವರದಿಯಿಂದ ಸಾಬೀತಾಗಿರುವುದರಿಂದ ವಿಚಾರಣಾ ವರದಿಯನ್ನು ಒಪ್ಪಿ ಆಪಾದಿತರುಗಳಿಗೆ ಈ ಕೆಳಕಂಡಂತೆ ದಂಡನೆ ವಿಧಿಸಲಾಗಿದೆ.

(1) ಶ್ರೀ ಹೆಚ್.ಆರ್. ಶಾಂತಕುಮಾರ ಶೆಟ್ಟಿ ರವರು ಈಗ ವಯೋನಿವೃತ್ತರಾಗಿರುವುದರಿಂದ ಅವರಿಗೆ 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214(1)(ಎ)ರ ಪ್ರಕಾರ ಮಾಸಿಕ 500.00 ರೂ.ಗಳಂತೆ ಪಿಂಚಣಿಯಲ್ಲಿ ಕಡ್ಡಾಯವಾಗಿ ಕಡಿತಗೊಳಿಸುವ ದಂಡನೆ ವಿಧಿಸಲಾಗಿದೆ.

(2) 1957ರ ಕರ್ನಾಟಕ ನಾಗರೀಕ ಸೇವೆ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 8(iii) ನಿಯಮದಡಿ ಶ್ರೀ ಎಸ್.ಜಿ. ಬಸವಮುನಿಯಪ್ಪ, ಪ್ರಥಮ ದರ್ಜೆ ಸಹಾಯಕರು (ಪ್ರಸ್ತುತ ಅಧೀಕ್ಷಕರು, ಸರ್ಕಾರಿ ಪಾಲಿಟೆಕ್ನಿಕ್, ಚನ್ನಪಟ್ಟಣ) ರವರಿಗೆ ಅವರ ಎರಡು ವೇತನ ಬಡ್ತಿಗಳನ್ನು ಸಂಚಿತ ಪರಿಣಾಮಬೀರದಂತೆ ತಡೆಯುವ (withholding of two increments without cummulative effect) ದಂಡನೆ ವಿಧಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1090

**ಕೆ.ಎಸ್. ವೇಣುಗೋಪಾಲ್**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಯುದ್ಧ ಮತ್ತು ಆಂತರಿಕ ಭದ್ರತೆ ಕಾರ್ಯಾಚರಣೆಯಲ್ಲಿ ಮಡಿದ ಯೋಧರ:ಅಧಿಕಾರಿಗಳ ಅವಲಂಬಿತರಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ನಿವೇಶನವನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಮಾಜಿ ಸೈನಿಕರ ಪುನರ್ನಿರ್ಮಾಣ ಮತ್ತು ಪುನರ್ವಸತಿ ವಿಶೇಷ ನಿಧಿ ಮತ್ತು ರಾಜ್ಯಪಾಲರ ರಕ್ಷಣಾ ನಿಧಿ ಸಭೆಗಳ ನಡವಳಿಗಳು ದಿನಾಂಕ:18-3-2000.

2. ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ, ಬೆಂಗಳೂರು, ರವರ ದಿನಾಂಕ 24-5-2003ರ ಪತ್ರ.

**ಪ್ರಸ್ತಾವನೆ:**

ರಾಜ್ಯಪಾಲರ ರಕ್ಷಣಾ ನಿಧಿ ಸಮಿತಿಯ ದಿನಾಂಕ:18-3-2000ರ ಸಭೆಯ ನಿರ್ಣಯದ ಮೇರೆಗೆ ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ ಇಲಾಖೆ ಅವರು ಪ್ರಸ್ತಾವನೆಯಲ್ಲಿ ಯುದ್ಧ ಕಾರ್ಯಾಚರಣೆ ಅಥವಾ ರಾಷ್ಟ್ರದ ಆಂತರಿಕ ಭದ್ರತಾ ಕಾರ್ಯಾಚರಣೆಯಲ್ಲಿ ಮಡಿದ ಯೋಧರ:ಅಧಿಕಾರಿಗಳ ಅವಲಂಬಿತರಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಉಚಿತ ನಿವೇಶನವನ್ನು ಹಂಚಿಕೆ ಮಾಡುವ ಬಗ್ಗೆ ಕೆಲವು ದಿವಸಗಳಿಂದ ಪ್ರಸ್ತಾವನೆಯು ಸರ್ಕಾರದ ಪರಿಶೀಲನೆಯಲ್ಲಿದ್ದು, ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಉಚಿತವಾಗಿ ಈ ಕೆಳಕಂಡಂತೆ ನಿವೇಶನವನ್ನು ಹಂಚಿಕೆ ಮಾಡುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿದೆ.

1) ಅಧಿಕಾರಿಗಳು:ಕಮಿ-ಷನ್ಡ್ ಆಫೀಸರ್ - 40' x 60'

2) ಕಮಿ-ಷನ್ಡ್‌ಯೇತರ ಅಧಿಕಾರಿಗಳು:ಇತರರು - 30' x 40'

ಆದ್ದರಿಂದ, ಈ ಆದೇಶ;

### ಸರ್ಕಾರದ ಆದೇಶ ಸಂಖ್ಯೆ:ನಅಇ 546 ಬೆಂಭೂಸ್ವಾ 99, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2003

ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರ (ನಿವೇಶನ ಹಂಚಿಕೆ) ನಿಯಮಗಳು 1984ಕ್ಕೆ ತಿದ್ದುಪಡಿ ಮಾಡುವುದನ್ನು ಕಾಯ್ದಿರಿಸಿ ಈ ಕೂಡಲೆ ಜಾರಿಗೆ ಬರುವಂತೆ ಯುದ್ಧ ಅಥವಾ ರಾಷ್ಟ್ರದ ಆಂತರಿಕ ಭದ್ರತೆ ಕಾರ್ಯಾಚರಣೆಯಲ್ಲಿ ಮಡಿದ ಅಧಿಕಾರಿಗಳ:ಯೋಧರ ಅವಲಂಬಿತರಿಗೆ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ವತಿಯಿಂದ ಕೆಳಕಂಡಂತೆ ಉಚಿತ ನಿವೇಶನಗಳನ್ನು ಹಂಚಿಕೆ ಮಾಡಲು ಸರ್ಕಾರವು ಆದೇಶಿಸಿದೆ.

1) ಅಧಿಕಾರಿಗಳು:ಕಮಿ-ಷನ್ಡ್ ಅಧಿಕಾರಿಗಳು - 40' x 60'

2) ನಾನ್ ಕಮಿ-ಷನ್ಡ್ ಅಧಿಕಾರಿಗಳು ಮತ್ತು ಇತರರು - 30' x 40'

**ಷರತ್ತುಗಳು:-**

1) ಉಚಿತ ನಿವೇಶನಗಳನ್ನು ಹಂಚಿಕೆ ಮಾಡುವ ಉದ್ದೇಶಕ್ಕಾಗಿ, ಯುದ್ಧ ಮತ್ತು ಆಂತರಿಕ ಭದ್ರತೆ ಕಾರ್ಯಾಚರಣೆಗಾಗಿ ಮೃತಪಟ್ಟವರ ಯೋಧರ ವಿಧವೆಯರು/ರಕ್ತಸಂಬಂಧಿಕರು/ಅವಲಂಬಿತರು ಹಾಗೂ ಯುದ್ಧ ಕಾರ್ಯಾಚರಣೆಯಲ್ಲಿ ಅಂಗವಿಕಲರಾದ ಯೋಧರ ಕುರಿತು ನಿರ್ದೇಶಕರು, ಸೈನಿಕ ಕಲ್ಯಾಣ ಮತ್ತು ಪುನರ್ವಸತಿ, ಇವರು ಶಿಫಾರಸ್ಸು ಮಾಡಿದಂತಹ ಪ್ರಕರಣಗಳನ್ನು ಮಾತ್ರ ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಅಂಗೀಕರಿಸುವುದು.

2) ಉಚಿತ ನಿವೇಶನವನ್ನು 10 ವರ್ಷಗಳ ಗುತ್ತಿಗೆ-ಕಂ-ಮಾರಾಟ ಆಧಾರದ ಮೇಲೆ ಮಂಜೂರು ಮಾಡುವುದು. ಗುತ್ತಿಗೆ ಅವಧಿಯು ಮುಗಿದ ನಂತರ ಶುದ್ಧ ಕ್ರಿಯಾ ಪತ್ರವನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರವು ಬರೆದುಕೊಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ವ್ಹಿ.ಆರ್. ಇಲಕಲ್**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ.

ಪಿ.ಆರ್. 1091

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಂ.ಆರ್. ರಾಜರತ್ನಂ, ನಿವೃತ್ತ ವೈದ್ಯಾಧಿಕಾರಿ ಹಾಗೂ ಶ್ರೀ ಟಿ.ಎ. ನಾಗರಾಜ್, ದ್ವಿತೀಯ ದರ್ಜೆ ಸಹಾಯಕರು ಪ್ರಾಥಮಿಕ ಆರೋಗ್ಯ ಕೇಂದ್ರ, ರಾಮಾಪುರ, ಕೊಳ್ಳೆಗಾಲ ತಾಲ್ಲೂಕು ಇವರ ವಿರುದ್ಧ ಶಿಸ್ತುಕ್ರಮ - ದಂಡನೆ ವಿಧಿಸುವ ಬಗ್ಗೆ ಆದೇಶ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಆಕುಕ 47 ಎಂಎಸ್ಎ 90 ದಿನಾಂಕ: 5/5/1990.

2) ಮುಖ್ಯ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಮೈಸೂರು ಇವರ ಆದೇಶ ಸಂಖ್ಯೆ: ಎ-2/(1) ಇಎಸ್‌ಟಿ - 104/ 89-90 ದಿನಾಂಕ: 5/1/1990.

3) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಕುಕ 47 ಎಂಎಸ್ಎ 90 ದಿನಾಂಕ: 9/4/1992.

4) ಡಾ: ಎಂ.ಆರ್. ರಾಜರತ್ನಂ, ವೈದ್ಯಾಧಿಕಾರಿ ಇವರ ರಕ್ಷಣಾ ಹೇಳಿಕೆ ದಿನಾಂಕ: 6/5/1992.

5) ಶ್ರೀ ಟಿ.ಎ. ನಾಗರಾಜ್, ದ್ವಿತೀಯ ದರ್ಜೆ ಸಹಾಯಕ, ಇವರ ರಕ್ಷಣಾ ಹೇಳಿಕೆ ದಿನಾಂಕ: 4/9/1992.

6) ಸರ್ಕಾರದ ಆದೇಶ ಸಂಖ್ಯೆ: ಆಕುಕ 47 ಎಂಎಸ್ಎ 90, ದಿನಾಂಕ: 20/10/1993.

7) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಎಆರ್-5/23/97 ದಿನಾಂಕ: 24/9/1998.

8) ಸರ್ಕಾರದ ಆದೇಶ ಸಂಖ್ಯೆ: ಆಕುಕ 47 ಎಂಎಸ್ಎ 90 ದಿನಾಂಕ: 6/9/2001.

9) ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಎಆರ್-5/23/97 ದಿನಾಂಕ: 23/11/2002.
10) ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 47 ಎಂಎಸ್ಎ 90, ದಿನಾಂಕ: 2/11/2002.
11) ಡಾ: ಎಂ.ಆರ್. ರಾಜರತ್ನಂ, ವೈದ್ಯಾಧಿಕಾರಿ ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 20/1/2003.
12) ಶ್ರೀ ಟಿ.ಎ. ನಾಗರಾಜ್, ದ್ವಿತೀಯ ದರ್ಜೆ ಸಹಾಯಕ, ಇವರ ಪ್ರತಿ ರಕ್ಷಣಾ ಹೇಳಿಕೆ ದಿನಾಂಕ: 11/2/2003.
13) ಕರ್ನಾಟಕ ಲೋಕಾ ಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 23 ಸಿಎನ್ಎಸ್ 2003 ದಿನಾಂಕ: 24/6/2003.

**ಪ್ರಸ್ತಾವನೆ:**

ಡಾ: ಎಂ.ಆರ್. ರಾಜರತ್ನಂ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ರಾಮಾಪುರ, ಕೊಳ್ಳೆಗಾಲ ತಾಲ್ಲೂಕು ಇವರನ್ನು ಸರ್ಕಾರಿ ಹಣ ದುರುಪಯೋಗದ ಆಪಾದನೆಗೆ ಸಂಬಂಧಿಸಿದಂತೆ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಲಾಗಿತ್ತು.

ಸದರಿ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದ ದ್ವಿತೀಯ ದರ್ಜೆ ಸಹಾಯಕ ಶ್ರೀ ಟಿ.ಎ. ನಾಗರಾಜ್ ಇವರನ್ನು ಸಹ ಸರ್ಕಾರಿ ಹಣ ದುರುಪಯೋಗದ ಆಪಾದನೆ ಮೇಲೆ ಮುಖ್ಯ ಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ಮೈಸೂರು ಇವರು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಅಮಾನತ್ತುಗೊಳಿಸಿ ಆದೇಶಿಸಿದ್ದರು.

ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡ ಬಗ್ಗೆ ಮೇಲೆ (3) ರಲ್ಲಿ ಕಾರಣ ಕೇಳುವ ನೋಟೀಸನ್ನು ದೋಷಾರೋಪಣಾ ಪಟ್ಟಿಯೊಂದಿಗೆ ಆರೋಪಿತ ವೈದ್ಯಾಧಿಕಾರಿ/ ನೌಕರರಿಗೆ ಜಾರಿ ಮಾಡಿ ತಮ್ಮ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಕಾರಣ ಕೇಳುವ ನೋಟೀಸ್‌ಗೆ ಉತ್ತರವಾಗಿ ಆರೋಪಿತ ವೈದ್ಯರು ಮೇಲೆ (4) ರಲ್ಲಿ ತಮ್ಮ ಪತ್ರದಲ್ಲಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ಅಲ್ಲಗಳೆದಿರುತ್ತಾರೆ. ಶ್ರೀ ಟಿ.ಎ. ನಾಗರಾಜ್ ದ್ವಿತೀಯ ದರ್ಜೆ ಸಹಾಯಕರು ಸಹ ಮೇಲೆ (5) ರಲ್ಲಿ ಓದಲಾದ ಪತ್ರದ ಮೂಲಕ ತಮ್ಮ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ತಮ್ಮ ಮೇಲೆ ಮಾಡಲಾದ ಆರೋಪವನ್ನು ಅಲ್ಲಗೆಳೆದಿದ್ದಾರೆ.

ಆರೋಪಿತರು ನೀಡಿದ ಕಾರಣಗಳು ತೃಪ್ತಿಕರವಾಗಿಲ್ಲದ್ದರಿಂದ ಸರ್ಕಾರವು ಪ್ರಕರಣಕ್ಕೆ ಸಂಬಂಧಿಸಿದಂತೆ ಜಂಟಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಮೇಲೆ (6) ರಲ್ಲಿ ಓದಲಾದ ಆದೇಶದಲ್ಲಿ ನಿಯಮ-11ರ ಜೊತೆ ಓದಲಾದ ನಿಯಮ-13 ರಡಿಯಲ್ಲಿ ಜಂಟಿ ಇಲಾಖಾ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಕರ್ನಾಟಕ ಲೋಕಾಯುಕ್ತ ಬೆಂಗಳೂರು ಇವರಿಗೆ ವಹಿಸಲಾಗಿತ್ತು.

ಸರ್ಕಾರದ ಆದೇಶ ದಿನಾಂಕ: 23-10-1993ನ್ನು ಅನುಸರಿಸಿ ಕರ್ನಾಟಕ ಲೋಕಾಯುಕ್ತವು ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಮೇಲೆ (7) ರಲ್ಲಿ ಓದಲಾದ ಪತ್ರದ ಮೂಲಕ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯನುಸಾರ ಡಾ: ಎಂ.ಆರ್. ರಾಜರತ್ನಂ, ನಿವೃತ್ತ ವೈದ್ಯಾಧಿಕಾರಿ ಹಾಗೂ ಶ್ರೀ ಟಿ.ಎ. ನಾಗರಾಜ್ ದ್ವಿತೀಯ ದರ್ಜೆ ಸಹಾಯಕ ಇವರುಗಳು ಜಿಲ್ಲಾ ಖಜಾನೆಯಿಂದ ರೂ.1,41,475/- (ಒಂದು ಲಕ್ಷ ನಲವತ್ತೊಂದು ಸಾವಿರದ ನಾಲ್ಕು ನೂರ ಎಪ್ಪತ್ತೈದು ಮಾತ್ರ) ಎ.ಸಿ.ಬಿಲ್ಲಿನ ಮೇಲೆ ಪಡೆದಿದ್ದು ರೂ.91.475/-ನ್ನು ಖಜಾನೆಯಿಂದ ಪಡೆದಿರುವ ಬಗ್ಗೆ ಎ.ಸಿ.ಬಿಲ್ಲುಗಳನ್ನು ಶಿಸ್ತುಪ್ರಾಧಿಕಾರವು ವಿಚಾರಣಾ ಸಮಯದಲ್ಲಿ ನೀಡದೇ ಇದ್ದುದ್ದರಿಂದ ಆಪಾದನೆಯು ಸಾಬೀತಾಗಿಲ್ಲವೆಂಬ ನಿರ್ಣಯಕ್ಕೆ ಬಂದಿದ್ದರು.

ಕರ್ನಾಟಕ ಲೋಕಾಯುಕ್ತ ಇವರ ವಿಚಾರಣಾ ವರದಿಯನ್ನು ಸರ್ಕಾರವು ಪುನರ್ ಪರಿಶೀಲಿಸಿ ಪ್ರಕರಣಕ್ಕೆ ಸಂಬಂಧಪಟ್ಟ ಎ.ಸಿ.ಬಿಲ್ಲುಗಳನ್ನು ಜಿಲ್ಲಾ ಪಂಚಾಯತ್, ಮೈಸೂರು ಇವರಿಂದ ಪಡೆದು ಮೇಲೆ (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಎ.ಸಿ.ಬಿಲ್ಲುಗಳನ್ನು ಆಧರಿಸಿ ಪ್ರಕರಣಗಳನ್ನು ಮರು ವಿಚಾರಣೆ ಮಾಡುವಂತೆ ಆದೇಶಿಸಲಾಗಿತ್ತು.

ಸರ್ಕಾರದ ಆದೇಶ ದಿನಾಂಕ: 6-9-2001 ನ್ನು ಅನುಸರಿಸಿ ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಪ್ರಕರಣಕ್ಕೆ ಸಂಬಂಧಿಸಿದಂತೆ ಮರು ವಿಚಾರಣೆ ನಡೆಸಿ ಮೇಲೆ ಓದಲಾದ (9)ರ ತಮ್ಮ ಪತ್ರದಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಹಾಗೂ ಆರೋಪಿತರು ರೂ.71,474/-ಗಳಷ್ಟು ಸರ್ಕಾರಿ ಹಣ ದುರುಪಯೋಗಪಡಿಸಿಕೊಂಡ ಆಪಾದನೆಯು ಸಾಬೀತಾಗಿರುತ್ತದೆಂಬ ನಿರ್ಣಯಕ್ಕೆ ಬಂದಿರುತ್ತಾರೆ.

ಸದರಿ ವಿಚಾರಣಾ ವರದಿಯನ್ನು ಮೇಲೆ (10)ರಲ್ಲಿ ಓದಲಾದ ಸರ್ಕಾರದ ತಿಳುವಳಿಕೆ ಪತ್ರದ ಮೂಲಕ ಆರೋಪಿತ ವೈದ್ಯಾಧಿಕಾರಿ ಮತ್ತು ನೌಕರರಿಗೆ ಜಾರಿ ಮಾಡಲಾಗಿದ್ದು ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ತಮ್ಮ ವಿವರಣೆ ನೀಡುವಂತೆ ಕೋರಲಾಗಿತ್ತು. ಡಾ: ಎಂ.ಆರ್. ರಾಜರತ್ನಂ ನಿವೃತ್ತ ವೈದ್ಯಾಧಿಕಾರಿ ಇವರು ಮೇಲೆ (11) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ಅವರು ಯಾವುದೇ ತಪ್ಪನ್ನು ಮಾಡಿಲ್ಲವೆಂದು ಹಣ ದುರುಪಯೋಗದ ಆಪಾದನೆಯಲ್ಲಿ ತಮ್ಮದು ಯಾವುದೇ ಪಾತ್ರ ಇಲ್ಲವೆಂದು ಹಾಗೂ ನಿಷ್ಠೆಯಿಂದ ಸೇವೆ ಸಲ್ಲಿಸಿರುವುದಾಗಿ ಹೇಳಿಕೆ ನೀಡಿರುತ್ತಾರೆ. ಶ್ರೀ ಟಿ.ಎ. ನಾಗರಾಜ್, ದ್ವಿತೀಯ ದರ್ಜೆ ಸಹಾಯಕರು ಮೇಲೆ (12) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಪ್ರತಿ ರಕ್ಷಣಾ ಹೇಳಿಕೆಯನ್ನು ಸಲ್ಲಿಸಿದ್ದು ತಾವು ಡ್ರಾಯಿಂಗ್ ಅಂಡ್ ಡಿಸ್‌ಬರ್ಸಿಂಗ್ ಅಧಿಕಾರಿ ಅಲ್ಲವೆಂದು ಈ ಹಣ ದುರುಪಯೋಗಕ್ಕೆ ಡಾ: ರಾಜರತ್ನಂ ಅವರೇ ಜವಾಬ್ದಾರರೆಂದು ವಿಚಾರಣಾಧಿಕಾರಿಗಳು ತಪ್ಪಾಗಿ ನಿರ್ಣಯಕ್ಕೆ ಬಂದಿರುವುದಾಗಿ ತಿಳಿಸಿದ್ದಾರೆ. ಒಟ್ಟಾರೆ ತಮ್ಮ ಮೇಲಿನ ಆಪಾದನೆಯನ್ನು ನಿರಾಕರಿಸಿದ್ದಾರೆ. ಆದ್ದರಿಂದ ಹೊಸದಾಗಿ ಪರಿಗಣಿಸುವಂತಹ ಯಾವುದೇ ಹೊಸ ಅಂಶಗಳು ಇರುವುದಿಲ್ಲ.

ಪ್ರಕರಣವನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಡಾ: ಎಂ.ಆರ್. ರಾಜರತ್ನಂ ನಿವೃತ್ತ ವೈದ್ಯಾಧಿಕಾರಿ ಮತ್ತು ಶ್ರೀ ಟಿ.ಎ. ನಾಗರಾಜ್, ದ್ವಿತೀಯ ದರ್ಜೆ ಸಹಾಯಕರು ಇವರುಗಳು ರೂ.71,474/- ರೂ.ಗಳಷ್ಟು ಸರ್ಕಾರಿ ಹಣ ದುರುಪಯೋಗ ಪಡಿಸಿಕೊಂಡಿರುವುದು ಲೋಕಾಯುಕ್ತ ವಿಚಾರಣೆಯಿಂದ ದೃಢಪಟ್ಟಿರುವುದರಿಂದ ಈ ಕೆಳಕಂಡಂತೆ ದಂಡನೆ ವಿಧಿಸಲು ತೀರ್ಮಾನಿಸಿದೆ.

| | | | |
|---|---|---|---|
| 1) | ಡಾ: ಎಂ.ಆರ್. ರಾಜರತ್ನಂ ವೈದ್ಯಾಧಿಕಾರಿ, (ನಿವೃತ್ತ) | : | ಕ.ನಾ.ಸೇ.ನಿಯಮಾವಳಿ ನಿಯಮ-214 ರ ಅಡಿಯಲ್ಲಿ ಇವರು ಪಡೆಯುವ ವಿಶ್ರಾಂತಿ ವೇತನದ ಶೇ.25 ರಷ್ಟು ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಲು ಹಾಗೂ ಅವರಿಂದ ಆಗಿರುವ ಸರ್ಕಾರಿ ಹಣ ದುರುಪಯೋಗ ರೂ.35,737/- ನ್ನು ಅವರ ವಿಶ್ರಾಂತಿ ವೇತನದ ಮೇಲಿನ ತುಟ್ಟಿಭತ್ಯೆಯಿಂದ ಸರ್ಕಾರಕ್ಕೆ ಭರಿಸಲು ತೀರ್ಮಾನಿಸಿದೆ. |
| 2) | ಶ್ರೀ ಟಿ.ಎ. ನಾಗರಾಜ್ ದ್ವಿ.ದ.ಸಹಾಯಕ | : | ಕ.ನಾ.ಸೇ. (ಸಿಸಿಎ) ನಿಯಮಾವಳಿಗಳು 1957ರ ನಿಯಮ-8 (iva) ರ ಅಡಿಯಲ್ಲಿ ಅವರ ವೇತನ ಶ್ರೇಣಿಯಲ್ಲಿ ಅವರು ಪಡೆಯುತ್ತಿರುವ ಮೂಲ ವೇತನವನ್ನು ಕನಿಷ್ಟ ಮಟ್ಟಕ್ಕೆ ಶಾಶ್ವತವಾಗಿ ಇಳಿಸುವ ದಂಡನೆಯನ್ನು ವಿಧಿಸಲು ಹಾಗೂ ಸದರಿ ನಿಯಮಾವಳಿಗಳ ನಿಯಮ- 8 (iv) ಅಡಿಯಲ್ಲಿ ಅವರಿಂದ ಆಗಿರುವ ಸರ್ಕಾರಿ ಹಣ ದುರುಪಯೋಗ ರೂ. 35,737/- ನ್ನು ಅವರ ವೇತನದಿಂದ 20 ಸಮಾನ ಕಂತುಗಳಲ್ಲಿ ಕಟಾವು ಮಾಡುವಂತೆ ತೀರ್ಮಾನಿಸಿದೆ. |

ಮೇಲಿನ ಪ್ರಸ್ತಾವನೆಯಂತೆ ದಂಡನೆ ವಿಧಿಸಲು ಮೇಲೆ (13) ರಲ್ಲಿ ಓದಲಾದ ಪತ್ರದ ಮೂಲಕ ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯನ್ನು ಸಹ ಪಡೆಯಲಾಗಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ: ಆಕುಕ 47 ಎಂಎಸ್ಎ 90, ಬೆಂಗಳೂರು, ದಿನಾಂಕ: 28ನೇ ಜುಲೈ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಸರ್ಕಾರವು ಡಾ: ಎಂ.ಆರ್. ರಾಜರತ್ನಂ, ನಿವೃತ್ತ ವೈದ್ಯಾಧಿಕಾರಿ ಹಾಗೂ ಶ್ರೀ ಟಿ.ಎ. ನಾಗರಾಜ್, ದ್ವಿತೀಯ ದರ್ಜೆ ಸಹಾಯಕರು ಪ್ರಾಥಮಿಕ ಆರೋಗ್ಯ ಕೇಂದ್ರ, ರಾಮಾಪುರ, ಕೊಳ್ಳೆಗಾಲ ತಾಲ್ಲೂಕು, ಚಾಮರಾಜನಗರ ಜಿಲ್ಲೆ ಇವರಿಗೆ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿದೆ.

| | | | |
|---|---|---|---|
| 1) | ಡಾ: ಎಂ.ಆರ್. ರಾಜರತ್ನಂ ವೈದ್ಯಾಧಿಕಾರಿ, (ನಿವೃತ್ತ) | : | ಕ.ನಾ.ಸೇ.ನಿಯಮಾವಳಿ ನಿಯಮ-214 ರ ಅಡಿಯಲ್ಲಿ ಇವರು ಪಡೆಯುವ ವಿಶ್ರಾಂತಿ ವೇತನದ ಶೇ.25 ರಷ್ಟು ವಿಶ್ರಾಂತಿ ವೇತನವನ್ನು ಶಾಶ್ವತವಾಗಿ ಕಡಿತಗೊಳಿಸುವ ದಂಡನೆ ವಿಧಿಸಿದೆ. ಹಾಗೂ ಅವರಿಂದ ಆಗಿರುವ ಸರ್ಕಾರಿ ಹಣ ದುರುಪಯೋಗ ರೂ.35,737/- (ಮೂವತ್ತೈದು ಸಾವಿರದ ಏಳುನೂರ ಮೂವತ್ತೇಳು ಮಾತ್ರ) ಗಳನ್ನು ಅವರ ವಿಶ್ರಾಂತಿ ವೇತನದ ಮೇಲಿನ ತುಟ್ಟಿಭತ್ಯೆಯಿಂದ ಸರ್ಕಾರಕ್ಕೆ ಭರಿಸುವುದು. |
| 2) | ಶ್ರೀ ಟಿ.ಎ. ನಾಗರಾಜ್ ದ್ವಿ.ದ.ಸಹಾಯಕ | : | ಕ.ನಾ.ಸೇ. (ಸಿಸಿಎ) ನಿಯಮಾವಳಿಗಳು 1957ರ ನಿಯಮ-8 (iva) ರ ಅಡಿಯಲ್ಲಿ ಅವರ ವೇತನ ಶ್ರೇಣಿಯಲ್ಲಿ ಅವರು ಪಡೆಯುತ್ತಿರುವ ಮೂಲ ವೇತನವನ್ನು ಕನಿಷ್ಟ ಮಟ್ಟಕ್ಕೆ ಶಾಶ್ವತವಾಗಿ ಇಳಿಸುವ ದಂಡನೆಯನ್ನು ವಿಧಿಸಿದೆ. ಹಾಗೂ ಸದರಿ ನಿಯಮಾವಳಿಗಳ ನಿಯಮ- 8 (iv) ರ ಅಡಿಯಲ್ಲಿ ಅವರಿಂದ ಆಗಿರುವ ಸರ್ಕಾರಿ ಹಣ ದುರುಪಯೋಗ ರೂ. 35,737/- (ಮೂವತ್ತೈದು ಸಾವಿರದ ಏಳುನೂರ ಮೂವತ್ತೇಳು ಮಾತ್ರ) ಗಳನ್ನು ಅವರ ವೇತನದಿಂದ 20 ಸಮಾನ ಕಂತುಗಳಲ್ಲಿ ಕಟಾವು ಮಾಡಿ ಸರ್ಕಾರಕ್ಕೆ ಭರ್ತಿ ಮಾಡುವುದು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಕೆ. ತೆಗ್ಗಿನಮನಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1092

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ಎ.ಎಸ್. ಪಾರಶೆಟ್ಟಿ, ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆಎಂಎಫ್‌ಸಿ ನ್ಯಾಯಾಲಯ ಬೆಳಗಾವಿ, ಹಾಲಿ ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಅಧೀಕ್ಷರ ಕಚೇರಿ, ಚಿಕ್ಕಮಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆಗೆ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಸರ್ಕಾರಿ ವ್ಯಾಜ್ಯಗಳ ಇಲಾಖೆ ಬೆಂಗಳೂರು ರವರ ಪತ್ರ ಸಂ:ಡಿಪಿಎನ್:ಎಡಿಎಂ: 143:2001-02, ದಿನಾಂಕ: 15-01-2002.
2. ಸರ್ಕಾರದ ಪತ್ರ ಸಂ:ಲಾ 24 ಪಿಪಿಃ 2002, ದಿನಾಂಕ: 2-2-02.
3. ನಿರ್ದೇಶಕರು, ಅಭಿಯೋಗ ಸರ್ಕಾರಿ ವ್ಯಾಜ್ಯಗಳ ಇಲಾಖೆ ಬೆಂಗಳೂರು ರವರ ಪತ್ರ ಸಂಖ್ಯೆ:ಡಿಪಿಎನ್: ಕೇಂಸ:ಬಿ-37:2001-2002 ದಿನಾಂಕ:23-4-02.
4. ಕಾರಣ ಕೇಳುವ ತಿಳುವಳಿಕೆ ಪತ್ರ ಸಂ:ಲಾ 24 ಪಿಪಿಃ 02, ದಿನಾಂಕ:17-1-2003.
5. ಶ್ರೀ ಎ.ಎ. ಪಾರಶೆಟ್ಟಿಯವರ, ಸಮಜಾಯಿಷಿ, ದಿನಾಂಕ:13-01-03.
6. ಸರ್ಕಾರದ ಆದೇಶ ಸಂಖ್ಯೆ:ಸಿಆಸುಃ 3 ಸೇಇವಿ 96, ದಿನಾಂಕ: 24-4-1998.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ, ಶ್ರೀ ಎ.ಎಸ್. ಪಾರಶೆಟ್ಟಿಯವರು, ಬೆಳಗಾವಿಯ, 3ನೇ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ನ್ಯಾಯಾಲಯದ ಸಿ.ಸಿ.ನಂ.429-2001ರ ಪ್ರಕರಣವನ್ನು ನ್ಯಾಯಾಲಯವು ಸಂಬಂಧಿಸಿದ ಸಮನ್ಸ್, ವಾರೆಂಟ್ ಹಾಗೂ ಇನ್ನಿತರೆ ಕಾಗದ ಪತ್ರಗಳನ್ನು ಪೊಲೀಸ್ ಪೇದೆ ನಂ.2155 ರವರು ಎಂದಿನಂತೆ ತೆಗೆದುಕೊಂಡು ಹೋಗಿ ಸಾಕ್ಷಿದಾರರಿಗೆ ಸಾಕ್ಷಿ ನುಡಿಯುವ ಬಗ್ಗೆ ಈ ಹಿಂದೆ ಕೊಟ್ಟ ಹೇಳಿಕೆಗಳನ್ನು ಓದಿ ಹೇಳಿ ಅವರಿಗೆ ನೆನಪಿಸಿ ಕೊಡುವ ಕಾರ್ಯವನ್ನು ಮಾಡುವವರಿದ್ದು ದಿನಾಂಕ:29-11-01 ರಂದು ಬೆಳಗಾವಿಯ ಖಡೇ ಬಜಾರ್ ಪೊಲೀಸ್ ಠಾಣೆಯ ಪ್ರಕರಣ ಸಂಖ್ಯೆ:429-2001ರ ಸಾಕ್ಷಿದಾರರಿಗೆ ಸಾಕ್ಷಿ ನುಡಿಯುವ ಸಲುವಾಗಿ ಅವರ ಹೇಳಿಕೆಯನ್ನು ತೋರಿಸಿ ನ್ಯಾಯಾಲಯದ ಕೊಠಡಿಯ ಮುಂಭಾಗದಲ್ಲಿ ಓದಿ ಹೇಳುತ್ತಿದ್ದಾಗ ಶ್ರೀ ಪಾರಶೆಟ್ಟಿಯವರು, ಪೊಲೀಸ್ ಪೇದೆಯ ತಲೆಗೆ ಕೈಯಿಂದ ಹೊಡೆದು, ನೀನು ಏನು ಓದಿ ಹೇಳುತ್ತಿ, ಏನೂ ಹೇಳಲಿಕ್ಕೆ ಹೋಗಬೇಡ ಎಂದು ಎದೆಯ ಮೇಲಿನ ಸಮವಸ್ತ್ರಗಳನ್ನು ಹಿಡಿದು ಎಳೆದು ದೂಡಿದಾಗ ಪೊಲೀಸ್ ಪೇದೆಯವರು ಏಕೆ ಹೊಡೆಯುತ್ತೀರಿ ಎಂದು ಕೇಳಿದಾಗ ಪಾರಶೆಟ್ಟಿಯವರು ನೀನು ಏನೂ ಹೇಳಬೇಡ ಎಂದು ಪೊಲೀಸ್ ಪೇದೆಯನ್ನು ಹೊರಗೆ ದೂಡಿ ಶ್ರೀ ಎ.ಎಸ್. ಪಾರಶೆಟ್ಟಿಯವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಯಾಗಿದ್ದು, ಕರ್ತವ್ಯ ನಿರತ ಇನ್ನೊಬ್ಬ ಅಧಿಕಾರಿಯ ಮೇಲೆ ವಿನಾಕಾರಣ ಹಲ್ಲೆ ಮಾಡಿ ಸರ್ಕಾರದ ಕೆಲಸಕ್ಕೆ ಅಡ್ಡಿಯುಂಟುಮಾಡಿ ಐಪಿಸಿ ಕಲಂ 323, 353 ರಡಿ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಶ್ರೀ ಎ.ಎಸ್. ಪಾರಶೆಟ್ಟಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಅಭಿಯೋಗ ನಿರ್ದೇಶಕರು ಸರ್ಕಾರವನ್ನು ಕೋರಿರುತ್ತಾರೆ.

ಕ್ರಮಾಂಕ (2) ರಲ್ಲಿ ಓದಲಾಗಿರುವ ಪತ್ರದಲ್ಲಿ, ಈ ಪ್ರಕರಣದ ಬಗ್ಗೆ ಪೂರ್ವಾಭಾವಿ ವಿಚಾರಣೆ ನಡೆಸಿ ವರದಿ ಸಲ್ಲಿಸುವಂತೆ ಅಭಿಯೋಗ ನಿರ್ದೇಶಕರನ್ನು ಕೋರಲಾಗಿತ್ತು.

ಕ್ರಮಾಂಕ (3) ರಲ್ಲಿ ಓದಲಾಗಿರುವ ಪತ್ರದಲ್ಲಿ ಅಭಿಯೋಗ ನಿರ್ದೇಶಕರು ಪ್ರಕರಣದ ಪೂರ್ವಭಾವಿ ವಿಚಾರಣಾ ವರದಿ ಸಲ್ಲಿಸಿದ್ದನ್ನು ಪರಿಶೀಲಿಸಲಾಗಿ, ದಿನಾಂಕ:29-11-01 ರಂದು ಘಟನೆಯು ನಡೆದಿದ್ದು ಮೇಲ್ನೋಟಕ್ಕೆ ಕಂಡುಬಂದಿರುತ್ತೆ ಎಂದು ಅಭಿಪ್ರಾಯ ನೀಡಿರುವ ಹಿನ್ನೆಲೆಯಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವುದು ಅವಶ್ಯ ಎಂದು ನಿರ್ಧರಿಸಿ.

ಕ್ರಮಾಂಕ (4)ರಲ್ಲಿ ಓದಲಾಗಿರುವ ಆರೋಪಿತ ಸರ್ಕಾರಿ ಅಧಿಕಾರಿಯವರಿಗೆ ಅನುಬಂಧ-1 ರಿಂದ 4 ವರೆಗೆ ದೋಷಾರೋಪಣಾ ಪಟ್ಟಿಯೊಂದಿಗೆ ಕಾರಣ ಕೇಳುವ ತಿಳುವಳಿಕೆ ಪತ್ರವನ್ನು ದಿನಾಂಕ:23-1-03 ರಂದು ಜಾರಿಮಾಡಲಾಗಿತ್ತು.

ಕ್ರಮಾಂಕ (5) ರಲ್ಲಿ ಓದಲಾಗಿರುವ ಶ್ರೀ ಎ.ಎ. ಪಾರಶೆಟ್ಟಿಯವರು ಸರ್ಕಾರದ ಕಾರಣ ಕೇಳುವ ತಿಳುವಳಿಕೆ (ಪತ್ರಕ್ಕೆ ಉತ್ತರಿಸುತ್ತಾ, ಅವರ ಮೇಲಿನ ಆರೋಪಗಳನ್ನು ಅಲ್ಲಗಳೆದು ಕೈಗೊಳ್ಳಲಿರುವ ವಿಚಾರಣೆಯನ್ನು ಕೈಬಿಡಬೇಕೆಂದು ವಿನಂತಿಸಿಕೊಂಡಿರುತ್ತಾರೆ.

ಶ್ರೀ ಎ.ಎ. ಪಾರಶೆಟ್ಟಿಯವರು ಸಲ್ಲಿಸಿದ ಲಿಖಿತ ಸಮಜಾಯಿಷಿಯನ್ನು ಸರ್ಕಾರವು ಪರಿಶೀಲಿಸಿ, ಅವರ ಹೇಳಿಕೆಯು ಒಪ್ಪುವಂತಹದಲ್ಲವಾದ್ದರಿಂದ ಸದರಿ ಆರೋಪಿತರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಹಿತದೃಷ್ಠಿಯಿಂದ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಮೇಲೆ (6) ರಲ್ಲಿ ಓದಲಾದ ದಿನಾಂಕ:24-4-98 ರ ಆದೇಶದನ್ವಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 24 ಪಿಪಿಇ 2002, ಬೆಂಗಳೂರು, ದಿನಾಂಕ: 5ನೇ ಆಗಸ್ಟ್ 2003**

ಶ್ರೀ ಎ.ಎ. ಪಾರಶೆಟ್ಟಿ, ಸಹಾಯಕ ಅಭಿಯೋಗ ನಿರ್ದೇಶಕರು, (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, 3ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ ಬೆಳಗಾವಿ) ಇವರ ವಿರುದ್ಧದ ಆಪಾದನೆಯ ಬಗ್ಗೆ 1957ರ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಾವಳಿಯ, 11ನೇ ನಿಯಮದ ಉಪ ನಿಯಮ (2) ರನ್ವಯ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂ.ಸಿಆಸುಇ 3 ಸೇಇವಿ 96, ದಿನಾಂಕ:24-4-1998ರ ಪ್ರಕಾರ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11 ಮತ್ತು 11'ಎ' ರನ್ವಯ ಶ್ರೀಯುತ ಸಿ.ಕೆ. ಬಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಸಂ.2209, "ತ್ರಿಕನ್ಯ" 80 ಅಡಿ ರಸ್ತೆ, ಎಚ್.ಎ.ಎಲ್. 3ನೇ ಹಂತ, ಇಂದಿರಾನಗರ, ಬೆಂಗಳೂರು-8 ರವರನ್ನು ಪ್ರಕರಣವೊಂದಕ್ಕೆ ರೂ.5,000-00(ಐದು ಸಾವಿರ ರೂಗಳು ಮಾತ್ರ) ಸಂಚಿತ ಸಂಭಾವನೆ ಹಾಗೂ ರೂ.1,000 (ಒಂದು ಸಾವಿರ ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ವಿಚಾರಣಾಧಿಕಾರಿಯನ್ನಾಗಿ ಹಾಗೂ ಸದರಿ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಸದರಿ ನಿಯಮಗಳ ನಿಯಮ 11(5)(ಸಿ) ರನ್ವಯ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರನ್ನು ಮಂಡನಾಧಿಕಾರಿಯಾಗಿ ಕೆಳಕಂಡ ಷರತ್ತುಗಳೊಂದಿಗೆ ನೇಮಿಸಲಾಗಿದೆ.

**ಷರತ್ತುಗಳು:**

1) ಇಲಾಖಾ ವಿಚಾರಣೆಯನ್ನು ನಿರ್ದೇಶಕರು, ಅಭಿಯೋಗ ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಕಾರ್ಯಾಲಯದಲ್ಲಿ ನಡೆಸತಕ್ಕದ್ದು.

2) ವಿಚಾರಣಾ ಪ್ರಾಧಿಕಾರಕ್ಕೆ ವಿಚಾರಣೆ ಮುಗಿಯುವವರೆಗೆ ಅಭಿಯೋಗ ನಿರ್ದೇಶಕರು ತಮ್ಮ ಕಚೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ:ಬೆರಳಚ್ಚುಗಾರರ ಸೇವೆಯನ್ನು ಒದಗಿಸುವುದರ ಜೊತೆಗೆ ಅಗತ್ಯ ಲೇಖನ ಸಾಮಗ್ರಿಗಳನ್ನು ಪೂರೈಸತಕ್ಕದ್ದು.

3) ಇಲಾಖಾ ವಿಚಾರಣೆಯನ್ನು ಎರಡು ತಿಂಗಳೊಳಗೆ ಮುಕ್ತಾಯಗೊಳಿಸಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

4) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರು ರೂ.5,000-00 ಸಂಚಿತ ಸಂಭಾವನೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.

5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-2004ನೇ ಸಾಲಿನ ಆಯವ್ಯಯದಲ್ಲಿನ ಕಚೇರಿ ವೇತನ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾದ ಮೊತ್ತದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1093

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ, ಹಾಗೂ ಶ್ರೀ ಆರ್.ಡಿ. ಶಿರಗುಪ್ಪಿ, ಅಭಿಯೋಗ ಉಪ ನಿರ್ದೇಶಕರು, ಪೊಲೀಸ್ ಅಕಾಡೆಮಿ ಮೈಸೂರು ರವರ ವಿರುದ್ಧದ ಇಲಾಖೆ ವಿಚಾರಣೆಗೆ ನೇಮಿಸಿದ್ದ ಮಂಡನಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 186 ಪಿಪಿಇ 2001, ದಿನಾಂಕ:6-5-03.
2. ಸರ್ಕಾರಿ ಆದೇಶ ಸಂಖ್ಯೆ:ಲಾ 33 ಪಿಪಿಇ 02, ದಿನಾಂಕ:7-5-03.
3. ಶ್ರೀ ಬಿ. ತಿಮ್ಮಣ್ಣನಾಯಕ್, 1ನೇ ಅಧಿಕ ಸರ್ಕಾರಿ ಅಭಿಯೋಜಕರು, ಮೈಸೂರು ರವರ ಪತ್ರ ಸಂ.24:03-04, ದಿನಾಂಕ: 25-6-03.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ರವರ ಪತ್ರ ಸಂ:ಡಿಪಿಎನ್:ಸಿಕೆಎಂ:241:2001, ದಿನಾಂಕ:10-7-03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ಮತ್ತು (2) ರಲ್ಲಿ ಓದಲಾಗಿರುವ ಸರ್ಕಾರದ ಆದೇಶ ಸಂ.ಲಾ 186 ಪಿಪಿಇ 01, ದಿನಾಂಕ:6-5-03 ರಲ್ಲಿ ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ ರವರ ವಿರುದ್ಧ ಹಾಗೂ ಸರ್ಕಾರದ ಆದೇಶ ಸಂ.ಲಾ 33 ಪಿಪಿಇ 02, ದಿನಾಂಕ:7-5-03 ರಲ್ಲಿ ಶ್ರೀ ಆರ್.ಡಿ. ಶಿರಗುಪ್ಪಿ, ಅಭಿಯೋಗ ಉಪ ನಿರ್ದೇಶಕರು, ಪೊಲೀಸ್ ಅಕಾಡೆಮಿ, ಮೈಸೂರು ರವರ ವಿರುದ್ಧ ಇಲಾಖಾ ವಿಚಾರಣೆಗೆ ಆದೇಶಿಸಿ ಶ್ರೀ ಬಿ. ತಿಮ್ಮಣ್ಣನಾಯಕ್, ಹಿಂದಿನ ಅಭಿಯೋಗ ಉಪ ನಿರ್ದೇಶಕರು, ಮೈಸೂರು ರವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿರುತ್ತದೆ.

ಮೇಲೆ ಕ್ರಮಾಂಕ (3) ರಲ್ಲಿ ಓದಲಾಗಿರುವ ಪತ್ರದಲ್ಲಿ ಶ್ರೀ ಬಿ. ತಿಮ್ಮಣ್ಣನಾಯಕ್, ಹಿಂದಿನ ಅಭಿಯೋಗ ಉಪ ನಿರ್ದೇಶಕರು, ಮೈಸೂರು ರವರು ಸರ್ಕಾರದ ಅಧಿಸೂಚನೆ ಸಂಖ್ಯೆ:ಲಾ 103 ಪಿಪಿಇ 03, ದಿನಾಂಕ:31-5-03 ರಲ್ಲಿ ವರ್ಗಾವಣೆ ಹೊಂದಿ ಮೈಸೂರು ಜಿಲ್ಲಾ ಹಾಗೂ ಸತ್ರ ನ್ಯಾಯಾಲಯದಲ್ಲಿ 1ನೇ ಅಧಿಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದು, ಸದರಿ ನ್ಯಾಯಾಲಯದ ಕರ್ತವ್ಯದ ಜೊತೆಗೆ ಎರಡು ಪ್ರಕರಣಗಳ ಮಂಡನಾಧಿಕಾರಿಯಾಗಿ ಕರ್ತವ್ಯ ನಿರ್ವಹಿಸಲು ತುಂಬಾ ಅನಾನುಕೂಲವಾಗಿರುತ್ತದೆ. ಆದ್ದರಿಂದ ಮೇಲಿನ ಎರಡು ಪ್ರಕರಣಗಳಲ್ಲಿ ತನ್ನ ಬದಲಿಗೆ ಬೇರೆ ಮಂಡನಾಧಿಕಾರಿಯನ್ನು ನೇಮಿಸಬೇಕೆಂದು ಕೋರಿರುತ್ತಾರೆಂದು.

ಕ್ರಮಾಂಕ (4) ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಶ್ರೀ ಬಿ. ತಿಮ್ಮಣ್ಣನಾಯಕ್ ಅವರ ಬದಲಿಗೆ ಶ್ರೀ ಎಲ್.ಎ. ಜವಳಿ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ರವರನ್ನು ಮಂಡನಾಧಿಕಾರಿಯಾಗಿ ನೇಮಿಸಬಹುದಾಗಿದೆ ಎಂದು ತಿಳಿಸಿರುತ್ತಾರೆ. ಮೇಲೆ ವಿವರಿಸಿರುವ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 33 ಪಿಪಿಇ 2002, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2003**

ಶ್ರೀ ಎಂ. ನರಸಪ್ಪ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಹಾಗೂ ಶ್ರೀ ಆರ್.ಡಿ. ಶಿರಗುಪ್ಪಿ, ಅಭಿಯೋಗ ಉಪ ನಿರ್ದೇಶಕರು, ಪೊಲೀಸ್ ಅಕಾಡೆಮಿ ಮೈಸೂರು ರವರುಗಳ ವಿರುದ್ಧದ ಇಲಾಖಾ ವಿಚಾರಣೆಗೆ ನೇಮಿಸಿದ್ದ ಮಂಡನಾಧಿಕಾರಿ ಶ್ರೀ ಬಿ. ತಿಮ್ಮಣ್ಣನಾಯಕ್ ಹಿಂದಿನ ಅಭಿಯೋಗ ಉಪ ನಿರ್ದೇಶಕರು, ಮೈಸೂರು ಇವರ ಬದಲಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿ 1957ರ ನಿಯಮ 11(5)(ಸಿ) ರನ್ವಯ ಶ್ರೀ ಎಲ್.ಎ. ಜವಳಿ, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಬೆಂಗಳೂರು ರವರನ್ನು ಸರ್ಕಾರದ ಪರವಾಗಿ ದಾಖಲೆಗಳನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಮಂಡನಾಧಿಕಾರಿಯನ್ನಾಗಿ ಸರ್ಕಾರವು ನೇಮಿಸಿದೆ.

ಉಳಿದಂತೆ ಮೇಲೆ ಕ್ರಮಾಂಕ (1) ಮತ್ತು (2) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1094

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

## ಇಂಧನ ಸಚಿವಾಲಯ

**ವಿಷಯ:** ಮುಡಬ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 2.0 ಮೆಗಾ ವ್ಯಾಟ್ ನಿಂದ 6.6 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 323 ಎನ್‌ಸಿಇ 2002, ದಿನಾಂಕ: 27.1.2003.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/ 06 / ಮುಡಬ / 2003 / 1296, ದಿನಾಂಕ: 21.8.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆಸರ್ಸ್ ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್, ಈ ಕಂಪನಿಗೆ 2.0 ಮೆಗಾ ವ್ಯಾಟ್ ಸಾಮರ್ಥ್ಯದ ಮುಡಬ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

2. ಪ್ರಸ್ತುತ, ಮೇಲೆ ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಯೋಜನೆಯ ಸ್ಥಳವನ್ನು ದಿನಾಂಕ: 5.8.2003 ರಂದು ಪರಿವೀಕ್ಷಣೆ ಮಾಡಿ ಸದರಿ ಕಂಪನಿಯ ಕೋರಿಕೆಯನ್ನು

ಪರಿಶೀಲಿಸಿದ ಮೇರೆಗೆ ಸಮಂಜಸವಾಗಿದ್ದು ಯೋಜನಾ ಸಾಮರ್ಥ್ಯವನ್ನು 2.0 ಮೆಗಾ ವ್ಯಾಟ್ ನಿಂದ 6.6 ಮೆಗಾ ವ್ಯಾಟ್‌ಗೆ ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

3. ಈ ಹಿನ್ನೆಲೆಯಲ್ಲಿ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 323 ಎನ್‌ಸಿಇ 2003, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2003**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ, ಮೆಸರ್ಸ್ ಅನ್ನಪೂರ್ಣೇಶ್ವರಿ ಪವರ್ ಪ್ರೈವೇಟ್ ಲಿಮಿಟೆಡ್ ಬೆಂಗಳೂರು ಈ ಕಂಪನಿಗೆ ಹಂಚಿಕೆ ಆಗಿರುವ 2.0 ಮೆಗಾ ವ್ಯಾಟ್ ಸಾಮರ್ಥ್ಯದ ಮುಡಬ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 6.6 ಮೆಗಾವ್ಯಾಟ್‌ಗೆ ವಿಸ್ತರಿಸಲಾಗಿದೆ.

5. ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ ವಿಧಿಸಲಾದ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಲ್. ಜಯರಾಂ**

ಪಿ.ಆರ್. 1095 ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಕೇಂದ್ರ ಕಛೇರಿ, ಬೆಂಗಳೂರು ಇಲ್ಲಿ ಇರುವ ಸಹಾಯಕ ನಿರ್ದೇಶಕರು (ಜೇನುಕೃಷಿ) ವಿಶ್ವ ವಿಭಾಗ ಈ ಹುದ್ದೆಯನ್ನು ಸಹಾಯಕ ನಿರ್ದೇಶಕರು (ವಿಶ್ವ) ಎಂದು ಮರು ಪದನಾಮಗೊಳಿಸುವ ಬಗ್ಗೆ.

**ಓದಲಾಗಿದೆ:** ಕೈಗಾರಿಕಾಭಿವೃದ್ಧಿ, ಆಯುಕ್ತರು ಮತ್ತು ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಅವರ ಪತ್ರ ಸಂಖ್ಯೆ ಆಡಳಿತ:ಸಿಬ್ಬಂದಿ:ಇ4:108:2003-04, ದಿನಾಂಕ: 18-7-2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕೈಗಾರಿಕಾಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ಇವರು ಸಹಾಯಕ ನಿರ್ದೇಶಕರು (ಜೇನುಕೃಷಿ) ಕೇಂದ್ರ ಕಛೇರಿ, ಬೆಂಗಳೂರು ಇವರು ವಿಶ್ವ ವಿಭಾಗದಲ್ಲಿ ಕಾಯಕನಗರ, ರೂಡ್‌ಸೆಟಿ ಸಂಸ್ಥೆಗಳು ಪ್ರಧಾನ ಮಂತ್ರಿಗಳ ರೋಜಗಾರ್ ಯೋಜನೆ, ವಿಶ್ವ ಕಾರ್ಯಗಾರಗಳು, ಮಂಡಳಿ ಮತ್ತು ನಿಗಮಗಳು ಹಾಗೂ ಜೇನುಕೃಷಿ ಕಾರ್ಯಕ್ರಮದ ಕೆಲಸಗಳು ಹಾಗೂ ಇನ್ನಿತರೆ ಕೆಲಸಗಳನ್ನು ನಿರ್ವಹಿಸುತ್ತಿರುವುದರಿಂದ ಈ ಹುದ್ದೆಯನ್ನು ಸಹಾಯಕ ನಿರ್ದೇಶಕರು (ವಿಶ್ವ) ಎಂದು ಮರುಪದನಾಮಗೊಳಿಸಿ ಹೊರಡಿಸುವಂತೆ ಕೋರಿದ್ದರು.

ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ನೀಡಿದೆ.

**ಸರ್ಕಾರದ ಆದೇಶ ಸಂಖ್ಯೆ ವಾಕೈ 118 ಕೈಸೇವಿ 2003, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಸರ್ಕಾರವು ಸ್ಥೂಲವಾಗಿ ಪರಿಶೀಲಿಸಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಕೇಂದ್ರ ಕಛೇರಿಯ ವಿಶ್ವ ವಿಭಾಗದಲ್ಲಿರುವ "ಸಹಾಯಕ ನಿರ್ದೇಶಕರು (ಜೇನುಕೃಷಿ)" ಹುದ್ದೆಯನ್ನು ತಕ್ಷಣದಿಂದಲೇ ಜಾರಿಗೆ ಬರುವಂತೆ "ಸಹಾಯಕ ನಿರ್ದೇಶಕರು (ವಿಶ್ವ)" ಎಂದು ಮರುಪದನಾಮಗೊಳಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ ಎಫ್‌ಡಿ:01:ಟಿಎಫ್‌ಪಿ 96, ದಿನಾಂಕ: 10-7-96ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲ್ಪಟ್ಟಿರುವ ಅಧಿಕಾರದಡಿಯಲ್ಲಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಮಂಜೇಗೌಡ**

ಪಿ.ಆರ್. 1096 ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, (ಕೈಗಾರಿಕಾ ಸೇವೆಗಳು)

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ವಿಷಯ:** 2003ರ ಸೆಪ್ಟೆಂಬರ್ - ಅಕ್ಟೋಬರ್‌ನಲ್ಲಿ ರಾಜ್ಯದಲ್ಲಿ ಜಾನುವಾರು ಗಣತಿಯನ್ನು ನಡೆಸುವ ಕುರಿತು ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಸಮಿತಿಗಳನ್ನು ರಚಿಸುವ ಕುರಿತು ಆದೇಶ.

**ಓದಲಾಗಿದೆ:** ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪತ್ರದ ಸಂಖ್ಯೆ ಡಿ.ಎ.ಹೆಚ್./ ಎಸ್.ಟಿ.ಸಿ./ಎಲ್.ಸಿ-1/03-04 ದಿನಾಂಕ: 11-7-2003.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ 11-7-2003ರ ಪತ್ರದಲ್ಲಿ ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು 2003ರ ಸೆಪ್ಟೆಂಬರ್ ಅಕ್ಟೋಬರ್‌ನಲ್ಲಿ ರಾಜ್ಯದಲ್ಲಿ 17ನೇ ಜಾನುವಾರು ಗಣತಿಯನ್ನು ನಡೆಸಲಿರುವ ವಿಚಾರವನ್ನು ಸರ್ಕಾರದ ಗಮನಕ್ಕೆ ತರುತ್ತಾ ಸದರಿ ಗಣತಿ ಕಾರ್ಯಕ್ರಮದ ಉಸ್ತುವಾರಿಯನ್ನು ನೋಡಿಕೊಳ್ಳುತ್ತಾ, ಸದರಿ ಕಾರ್ಯಕ್ರಮಗಳನ್ನು ಸುಗಮವಾಗಿ ನಡೆಸಲು ಅಗತ್ಯವಾದ ಸಲಹೆ ಸೂಚನೆ ನೀಡಿ ಸಹಕರಿಸಲು ಎರಡು ಸಮಿತಿಗಳನ್ನು ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕುಮಟ್ಟದಲ್ಲಿ ಕ್ರಮವಾಗಿ ಜಿಲ್ಲಾಧಿಕಾರಿ ಮತ್ತು ತಾಲ್ಲೂಕು ಪಂಚಾಯತ್ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ರಚಿಸಬೇಕಾದ ಅಗತ್ಯತೆಯ ಬಗ್ಗೆ ಕಾಣಿಸುತ್ತಾ ಸದರಿ ಎರಡು ಸಮಿತಿಗಳನ್ನು ಆದಷ್ಟು ಜಾಗ್ರತೆಯಾಗಿ ಸೃಜಿಸಿ ಆದೇಶಿಸುವಂತೆ ಸರ್ಕಾರವನ್ನು

ಕೋರಿದ್ದರು. ಹೀಗೆ ನಿರ್ದೇಶಕರಿಂದ ಬಂದಿರುವ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಸದರಿ ಕಾರ್ಯಕ್ರಮವನ್ನು ಕೆಲವೊಂದು ಇಲಾಖೆಗಳ ಸಹಕಾರದೊಂದಿಗೆ ನಡೆಸಿಕೊಂಡು ಹೋಗಬೇಕಾಗಿದ್ದು ಹಾಗೂ ಸದರಿ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ಅಗತ್ಯ ಸಲಹೆ ಸೂಚನೆಗಳನ್ನು ನೀಡಿ ಪ್ರಗತಿ ಪರಿಶೀಲನೆ ನಡೆಸಲು ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 11.7.2003ರ ಪತ್ರದಲ್ಲಿ ಸಲ್ಲಿಸಿರುವ ಪ್ರಸ್ತಾವನೆಯನ್ನು ಗಮನಕ್ಕೆ ತೆಗೆದುಕೊಂಡು ಈ ಕೆಳಕಾಣಿಸಿದಂತೆ ಸದಸ್ಯರನ್ನೊಳಗೊಂಡಂತೆ ಇರುವ ಎರಡು ಸಮಿತಿಗಳನ್ನು ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಕ್ರಮವಾಗಿ ಜಿಲ್ಲಾಧಿಕಾರಿ ಹಾಗೂ ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ ಇವರ ಅಧ್ಯಕ್ಷತೆಯಲ್ಲಿ ಸೃಜಿಸಲು ನಿರ್ಧರಿಸಿ ಅದರಂತೆ ಸದರಿ ಸಭೆಯ ನಡುವಳಿಯಲ್ಲಿ ದಾಖಲಿಸಿದೆ.

ಜಿಲ್ಲಾ ಮಟ್ಟದ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗುವುದು.

| | | |
|---|---|---|
| 1 | ಜಿಲ್ಲಾಧಿಕಾರಿಗಳು | ಅಧ್ಯಕ್ಷರು |
| 2 | ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು | ಸಹ ಅಧ್ಯಕ್ಷರು |
| 3 | ಜಂಟಿ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 4 | ಬೆಂಗಳೂರು ಮಹಾ ನಗರ ಪಾಲಿಕೆ ಉಪ ಆಯುಕ್ತರು (ಆಡಳಿತ) | ಸದಸ್ಯರು |
| 5 | ಉಪನಿರ್ದೇಶಕರು ತೋಟಗಾರಿಕೆ ಇಲಾಖೆ | ಸದಸ್ಯರು |
| 6 | ಹಿರಿಯ ಸಹಾಯಕ ನಿರ್ದೇಶಕರು, ಮೀನುಗಾರಿಕೆ ಇಲಾಖೆ | ಸದಸ್ಯರು |
| 7 | ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳು | ಸದಸ್ಯರು |
| 8 | ಜಿಲ್ಲೆಯಲ್ಲಿ ಬರುವ ಎಲ್ಲಾ ಮಹಾ ನಗರಪಾಲಿಕೆ ಆಯುಕ್ತರು (ಬೆಂಗಳೂರು ಮಹಾ ನಗರಪಾಲಿಕೆ ಹೊರತು ಪಡಿಸಿ) | ಸದಸ್ಯರು |
| 9 | ಕಾರ್ಯನಿರ್ವಾಹಕ ನಿರ್ದೇಶಕರು, ಜಿಲ್ಲಾ ಹಾಲು ಉತ್ಪಾದಕರ ಒಕ್ಕೂಟ (ಸಂಬಂಧಪಟ್ಟ ಜಿಲ್ಲೆಗಳು) | ಸದಸ್ಯರು |
| 10 | ಜಿಲ್ಲಾ ಉಪನಿರ್ದೇಶಕರು, ಪಶುಸಂಗೋಪನೆ ಹಾಗೂ ಪಶುವೈದ್ಯ ಸೇವಾ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

**ತಾಲ್ಲೂಕು ಮಟ್ಟದ ಸಮಿತಿಯನ್ನು ಈ ಕೆಳಕಂಡಂತೆ ರಚಿಸಲಾಗುವುದು.**

| | | |
|---|---|---|
| 1 | ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಹಣಾಧಿಕಾರಿಗಳು | ಅಧ್ಯಕ್ಷರು |
| 2 | ತಾಲ್ಲೂಕಿನ ತಹಶೀಲ್ದಾರರು | ಸದಸ್ಯರು |
| 3 | ಸಹಾಯಕ ನಿರ್ದೇಶಕರು, ಕೃಷಿ ಇಲಾಖೆ | ಸದಸ್ಯರು |
| 4 | ಹಿರಿಯ ಸಹಾಯಕ ನಿರ್ದೇಶಕರು, ತೋಟಗಾರಿಕಾ ಇಲಾಖೆ | ಸದಸ್ಯರು |
| 5 | ಸಹಾಯಕ ನಿರ್ದೇಶಕರು, ಮೀನುಗಾರಿಕೆ ಇಲಾಖೆ | ಸದಸ್ಯರು |
| 6 | ಮುಖ್ಯಾಧಿಕಾರಿಗಳು, ನಗರ ಸಭೆ, ಪುರಸಭೆ ಮತ್ತು ಪಟ್ಟಣ ಪಂಚಾಯತ್ | ಸದಸ್ಯರು |
| 7 | ತಾಲ್ಲೂಕು ಸಹಾಯಕ ನಿರ್ದೇಶಕರು, ಪಶುಸಂಗೋಪನಾ ಹಾಗೂ ಪಶುವೈದ್ಯ ಸೇವಾ ಇಲಾಖೆ | ಸದಸ್ಯ ಕಾರ್ಯದರ್ಶಿಗಳು |

**ಸರ್ಕಾರಿ ಆದೇಶ ಸಂಖ್ಯೆ: ಪಸಂಮೀ/74/ಪಪಾಯೋ/03 ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

ನಿರ್ದೇಶಕರು, ಪಶುಪಾಲನಾ ಮತ್ತು ಪಶುವೈದ್ಯ ಸೇವಾ ಇಲಾಖೆ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಪ್ರಸ್ತಾವನೆಯಲ್ಲಿ ಕಾಣಿಸಲಾದಂತೆ ಇರುವ ಸದಸ್ಯರನ್ನೊಳಗೊಂಡಂತೆ ಇರುವ ಎರಡು ಸಮಿತಿಗಳನ್ನು 17ನೇ ಜಾನುವಾರು ಗಣತಿ ಕಾರ್ಯಕ್ಕಾಗಿ ಸಂಬಂಧಿಸಿದಂತೆ ಅಗತ್ಯ ಮಾರ್ಗದರ್ಶನ ನೀಡಿ ಮೇಲ್ವಿಚಾರಣೆ ನಡೆಸುತ್ತಾ ಪ್ರಸ್ತಾಪಿತ ಜಾನುವಾರು ಗಣತಿಯು ಸುಸೂತ್ರವಾಗಿ ನಡೆಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ತೆಗೆದುಕೊಳ್ಳುವ ಸಲುವಾಗಿ ಜಿಲ್ಲಾ ಮಟ್ಟದಲ್ಲಿ ಮತ್ತು ತಾಲ್ಲೂಕು ಮಟ್ಟದಲ್ಲಿ ಕ್ರಮವಾಗಿ ಜಿಲ್ಲಾಧಿಕಾರಿಗಳು ಮತ್ತು ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ ಇವರ ಅಧ್ಯಕ್ಷತೆಯಲ್ಲಿ ಸೃಜಿಸಿ ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಸಂಪತ್ ಕುಮಾರ್**

ಪಿ.ಆರ್. 1097

ಸರ್ಕಾರದ ಅಧೀನ ಕಾರ್ಯದರ್ಶಿ,

ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ.

## ಆರ್ಥಿಕ ಸಚಿವಾಲಯ

**ವಿಷಯ:** ತಡವಾಗಿ ಪಾವತಿಯಾದ ಪಿಂಚಣಿ, ಉಪದಾನ ಮತ್ತು ರಜೆ ನಗದೀಕರಣ ಇವುಗಳ ಮೇಲೆ ಬಡ್ಡಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 199 ಪಿಇಎನ್ 93, ದಿನಾಂಕ: 13.9.94.
2. ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 92 ಪಿಇಎನ್ 95 ದಿನಾಂಕ: 17.6.95.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ ಕ್ರ. ಸಂ. (1) ಮತ್ತು (2)ರಲ್ಲಿ ಸೇವೆಯಿಂದ ನಿವೃತ್ತಿ ಹೊಂದಿದ ನಿವೃತ್ತ ಸರ್ಕಾರಿ ನೌಕರರಿಗೆ ಅಥವಾ ಅವರು ಸೇವೆಯಲ್ಲಿರುವಾಗ ಮರಣ ಹೊಂದಿದಲ್ಲಿ ಮತ್ತು ನಿವೃತ್ತಿಯ ನಂತರ ಮರಣ ಹೊಂದಿದಲ್ಲಿ ಅವರ ಕುಟುಂಬಕ್ಕೆ ಲಭ್ಯವಾಗುವ ನಿವೃತ್ತಿ ವೇತನ/ಮರಣೋತ್ತರ ಸೌಲಭ್ಯಗಳಿಗೆ ವಾರ್ಷಿಕ 12% ರಂತೆ ಬಡ್ಡಿಯನ್ನು ಮಂಜೂರು ಮಾಡಲಾಗಿತ್ತು. ಅನೇಕ

ಕಾರಣಗಳಿಂದಾಗಿ ಇತ್ತೀಚಿನ ವರ್ಷಗಳಲ್ಲಿ ಆರ್ಥಿಕ ಕ್ಷೇತ್ರದಲ್ಲಿ ಬಡ್ಡಿಯ ದರವು ಬಹಳಷ್ಟು ಕೆಳಗಿಳಿದಿರುತ್ತದೆ. ನಿಶ್ಚಿತ ಠೇವಣಿಗಳ ಮೇಲೆ ಬ್ಯಾಂಕುಗಳು ಮತ್ತು ಸಾಮಾನ್ಯ ಭವಿಷ್ಯನಿಧಿಯ ಮೇಲೆ ಸರ್ಕಾರವು ವಿಧಿಸುತ್ತಿರುವ ಬಡ್ಡಿಯ ದರವು ವಾರ್ಷಿಕ 12% ರಿಂದ 8% ಗೆ ಇಳಿದಿರುತ್ತದೆ. ಈ ಪರಿಸ್ಥಿತಿಯಲ್ಲಿ ವಿಳಂಬವಾಗಿ ಪಾವತಿಸಲ್ಪಡುವ ನಿವೃತ್ತಿ/ಮರಣೋತ್ತರ ಸೌಲಭ್ಯಗಳ ಮೇಲೆ ನಿಗದಿಪಡಿಸಲಾದ ವಾರ್ಷಿಕ ಬಡ್ಡಿಯ ದರವನ್ನು 12% ರಂತೆ ಸರ್ಕಾರವು ಪಾವತಿಸುತ್ತಿರುವುದನ್ನು ಮುಂದುವರಿಸುವುದು ನ್ಯಾಯಸಮ್ಮತವಾಗಿರುವುದಿಲ್ಲ. ಈ ಪರಿಸ್ಥಿತಿಯಲ್ಲಿ ವಿಳಂಬವಾಗಿ ಪಾವತಿಸಲ್ಪಡುವ ನಿವೃತ್ತಿ ವೇತನ/ಮರಣೋತ್ತರ ಸೌಲಭ್ಯಗಳಿಗೆ ಹಾಲಿ ಚಾಲ್ತಿಯಲ್ಲಿರುವ ಬಡ್ಡಿಯ ದರವನ್ನು ವಾರ್ಷಿಕ 12% ರಿಂದ 8% ಗೆ ಇಳಿಸಿ ಪರಿಷ್ಕರಿಸುವುದು ಸಮಂಜಸವೆಂಬುವುದನ್ನು ನಿರ್ಧರಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ (ವಿ) 1 ಪಿಇಎನ್ 03, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2003**

1. ಮೇಲಿನ ಪ್ರಸ್ತಾವನೆಯಂತೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಆಇ(ವಿ) 199 ಪಿಇಎನ್ 93 ದಿನಾಂಕ 13.9.94ನ್ನು ಭಾಗಶಃ ಪರಿಷ್ಕರಿಸಿ ವಿಳಂಬವಾಗಿ ಪಾವತಿಸಲ್ಪಡುವ ನಿವೃತ್ತಿ ವೇತನ/ಮರಣೋತ್ತರ ಸೌಲಭ್ಯಗಳ ಮೇಲೆ ವಿಧಿಸಲಾಗುವ ಬಡ್ಡಿಯ ದರವನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ವಾರ್ಷಿಕ 8% ಗೆ ನಿಗದಿಪಡಿಸಿ ಮಂಜೂರಾತಿ ನೀಡಲಾಗಿದೆ.

2. ಈ ಸರ್ಕಾರಿ ಆದೇಶದ ದಿನಾಂಕ: 21.8.2003 ರ ಮೊದಲು ನಿವೃತ್ತಿ ಹೊಂದಿದ, ನಿವೃತ್ತಿದಾರರ ನಿವೃತ್ತಿ ಸೌಲಭ್ಯಗಳು ಪಾವತಿಯಾಗದೇ ಉಳಿದಿದ್ದು ಅಥವಾ ದಿನಾಂಕ 21.8.2003 ರ ನಂತರ ಪಾವತಿಯಾದ, ನಿವೃತ್ತಿದಾರರ ನಿವೃತ್ತಿವೇತನ ಪ್ರಕರಣಗಳಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಆಇ (ವಿಶೇಷ) 864 ಪಿಇಎನ್ 84 ದಿನಾಂಕ:14.8.1985 ಮತ್ತು ಸಂಖ್ಯೆ: ಆಇ (ವಿಶೇಷ) 260 ಪಿಇಎನ್ 86 ದಿನಾಂಕ: 04.6.1986 ಗಳಲ್ಲಿ ನಿಗದಿಪಡಿಸಿರುವ ಬಡ್ಡಿಯ ದರದಲ್ಲಿ ದಿನಾಂಕ 12.9.94ರವರೆಗೆ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಆಇ (ವಿ) 199 ಪಿಇಎನ್ 93 ದಿನಾಂಕ 13.9.1994 ಮತ್ತು ಸರ್ಕಾರಿ ಆದೇಶ ಸಂಖ್ಯೆ: ಆಇ (ವಿ) 92/ಪಿಇಎನ್/95 ದಿನಾಂಕ: 17.6.95ಗಳಲ್ಲಿ ನಿಗದಿಪಡಿಸಿರುವ ದರದಲ್ಲಿ ಅನ್ವಯಿಸುವ ಬಡ್ಡಿಯನ್ನು ದಿನಾಂಕ 13.9.94 ರಿಂದ ದಿನಾಂಕ 20.8.2003ರವರೆಗಿನ ಅವಧಿಗೆ ಲೆಕ್ಕಹಾಕಿ ಪಾವತಿ ಮಾಡತಕ್ಕದ್ದು.

3. ಸರ್ಕಾರದ ಆದೇಶ ಸಂಖ್ಯೆ: ಆಇ (ವಿ) 199 ಪಿಇಎನ್ 93 ದಿನಾಂಕ: 13.9.94 ರಲ್ಲಿ ನಿಗದಿಪಡಿಸಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ ಮತ್ತು ಈಗಾಗಲೇ ಪಾವತಿಯಾಗಿ, ದಿನಾಂಕ 21.8.2003ರ ಒಳಗಾಗಿ ನಿವೃತ್ತಿ ಹೊಂದಿ ಮೇಲಿನ ಪ್ಯಾರಾ 2ರ ಅನ್ವಯ ಮುಕ್ತಾಯಗೊಂಡ ನಿವೃತ್ತಿ ವೇತನದ ಪ್ರಕರಣಗಳಿಗೆ ಈ ಪರಿಷ್ಕೃತ ಬಡ್ಡಿಯ ದರವು ಅನ್ವಯಿಸುವುದಿಲ್ಲ ಮತ್ತು ಹಾಗೂ ಅಂತಹ ಪ್ರಕರಣಗಳನ್ನು ಪುನರ್‌ಪರಿಗಣಿಸಲಾಗದೆಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1098

**ಕೆ.ಕೆ. ನಾಯಕ್**

ವಿಶೇಷಾಧಿಕಾರಿ (ವಿಶ್ರಾಂತಿ ವೇತನ) ಆರ್ಥಿಕ ಇಲಾಖೆ.

**ವಿಷಯ:** ವಿಮಾನಯಾನದ ಮೂಲಕ ಪ್ರವಾಸ - ಪ್ರಾದೇಶಿಕ ವಿಮಾನಯಾನದ ಮೂಲಕ ಪ್ರಯಾಣ ಮಾಡಲು ಅನುಮತಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಅಪರ ಮುಖ್ಯಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ, ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಐಡಿಡಿ 58 ಡಿಐಎ 2003, ದಿನಾಂಕ 28.7.2003.

**ಪ್ರಸ್ತಾವನೆ:**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯಗಳ ಅಭಿವೃದ್ಧಿ ಇಲಾಖೆ, ಇವರು ಕರ್ನಾಟಕದಲ್ಲಿ ಪ್ರಾದೇಶಿಕ ವಿಮಾನಯಾನ ಸೇವೆಗಳನ್ನು ಪ್ರಾರಂಭಿಸಲಾಗುತ್ತಿದ್ದು ಪ್ರಾದೇಶಿಕ ವಿಮಾನ ಸಂಸ್ಥೆಗಳ ದರ ಪರಿಣಾಮದ ಪೂರಕವಾಗಿ ನಿರ್ದಿಷ್ಟ ಅಂತಸ್ತಿನ ಅಧಿಕಾರಿಗಳನ್ನು ಪ್ರಾದೇಶಿಕ ವಿಮಾನಗಳಲ್ಲಿ ಪ್ರಯಾಣ ಮಾಡಲು ಅನುಮತಿ ನೀಡುವ ಬಗ್ಗೆ ಸರ್ಕಾರವು ಪರಿಶೀಲಿಸಬೇಕಾಗಿದೆಯೆಂದು ತಿಳಿಸುತ್ತಾ ರೂ.11,520/- ಮತ್ತು ಅದಕ್ಕೂ ಹೆಚ್ಚಿನ ವೇತನ ಪಡೆಯುತ್ತಿರುವ ಅಧಿಕಾರಿಗಳಿಗೆ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 487 ರಡಿಯಲ್ಲಿ ಕರ್ನಾಟಕ ರಾಜ್ಯದೊಳಗಡೆ ಯಾವುದೇ ಪ್ರಾದೇಶಿಕ ವಿಮಾನ ಸೇವೆಯಲ್ಲಿ ವಿಮಾನ ಪ್ರಯಾಣ ಕೈಗೊಳ್ಳಲು ಅನುಮತಿ ನೀಡುವಂತೆ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 05 ಸನಿತಿ 2003, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

ಸರ್ಕಾರವು ಪ್ರಸ್ತಾವನೆಯನ್ನು ವಿವರವಾಗಿ ಪರಿಶೀಲಿಸಿದ್ದು ರೂ.11,520/- ಮತ್ತು ಅದಕ್ಕೂ ಹೆಚ್ಚಿನ ವೇತನ ಪಡೆಯುತ್ತಿರುವ ಅಧಿಕಾರಿಗಳಿಗೆ ರಾಜ್ಯ ಸರ್ಕಾರವು ಕಾಲಕಾಲಕ್ಕೆ ಪ್ರಾದೇಶಿಕ ಸೇವೆಯೆಂದು ಘೋಷಿಸುವ ಯಾವುದೇ ಪ್ರಾದೇಶಿಕ ವಿಮಾನಗಳಲ್ಲಿ ಪ್ರಯಾಣ ಮಾಡಲು ಅನುಮತಿಸಿದೆ. ಇಲಾಖೆಯ ಜಂಟಿ ಮುಖ್ಯಸ್ಥರು, ಸಚಿವಾಲಯದ ಜಂಟಿ ಕಾರ್ಯದರ್ಶಿ ಮತ್ತು ಆಯ್ಕೆ ಶ್ರೇಣಿಯ ಕೆ.ಎ.ಎಸ್. ಅಧಿಕಾರಿಗಳು ಮತ್ತು ತತ್ಸಮಾನ ಶ್ರೇಣಿಯ ಅಧಿಕಾರಿಗಳು ಇದರ ವ್ಯಾಪ್ತಿಯಲ್ಲಿ ಬರುತ್ತಾರೆ. ಪ್ರಾದೇಶಿಕ ವಿಮಾನ ಸೇವಾ ವ್ಯಾಪ್ತಿಯಲ್ಲಿ ಬರುವ ಕರ್ನಾಟಕ ರಾಜ್ಯದೊಳಗಿನ ಯಾವುದೇ ಗಮ್ಯಸ್ಥಾನಕ್ಕೆ (destination) ಪ್ರಯಾಣ ಮಾಡಲು ಅನುಮತಿಸಿದೆ.

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗೆ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ**

ಪಿ.ಆರ್. 1099

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದಲ್ಲಿ ಹುದ್ದೆಗಳ ಸೃಜನೆ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 2094 ಡಿಎಸ್ (ಬಿ ಅಂಡ್ ಆರ್) 2003, ದಿನಾಂಕ: 7.5.2003 ಹಾಗೂ ಅರೆ ಸರ್ಕಾರಿ ಪತ್ರ ದಿನಾಂಕ: 9.5.2003.

**ಪ್ರಸ್ತಾವನೆ:**

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ತಮ್ಮ ಅನಧಿಕೃತ ಟಿಪ್ಪಣಿ ಹಾಗೂ ಅರೆ ಸರ್ಕಾರಿ ಪತ್ರಗಳಲ್ಲಿ ತಿಳಿಸಿರುವಂತೆ ಕೇಂದ್ರ ಸರ್ಕಾರವು 12ನೇ ಹಣಕಾಸು ಆಯೋಗವನ್ನು ರಚಿಸಿದ್ದು ಈ ಆಯೋಗವು ಈಗಾಗಲೇ ತನ್ನ ಕಾರ್ಯ ಆರಂಭಿಸಿರುತ್ತದೆ. ಈ ಆಯೋಗಕ್ಕೆ ಅಗತ್ಯ ಮಾಹಿತಿಯನ್ನು ಕಳುಹಿಸುವ ಕಾರ್ಯವನ್ನು ತುರ್ತಾಗಿ ಮಾಡಬೇಕಾಗಿರುತ್ತದೆ. ಹೀಗಾಗಿ ಆರ್ಥಿಕ ಇಲಾಖೆ ಆರ್ಥಿಕ ಆಯೋಗ ಕೋಶಕ್ಕೆ ಈ ಕೆಳಕಂಡ ಹುದ್ದೆಗಳನ್ನು ಸೃಜಿಸುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

1. ಅಧೀನ ಕಾರ್ಯದರ್ಶಿ : ವಿಶೇಷಾಧಿಕಾರಿ 1 ಹುದ್ದೆ
2. ಸಹಾಯಕ ಸಾಂಖ್ಯಿಕ ಅಧಿಕಾರಿ 1 ಹುದ್ದೆ
3. ಹಿರಿಯ ಸಹಾಯಕ 1 ಹುದ್ದೆ

ಈ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದ್ದು ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 59 ಸಸಿವಿ 2003, ಬೆಂಗಳೂರು, ದಿನಾಂಕ: 23ನೇ ಆಗಸ್ಟ್ 2003**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರ್ಥಿಕ ಇಲಾಖೆಯ ಆರ್ಥಿಕ ಆಯೋಗ ಕೋಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆವಿಗೆ ತಾತ್ಕಾಲಿಕವಾಗಿ ಸೃಜಿಸಲು ಮಂಜೂರಾತಿ ನೀಡಲಾಗಿದೆ:-

1. ಅಧೀನ ಕಾರ್ಯದರ್ಶಿ : ವಿಶೇಷಾಧಿಕಾರಿ 1 ಹುದ್ದೆ
2. ಸಹಾಯಕ ಸಾಂಖ್ಯಿಕ ಅಧಿಕಾರಿ 1 ಹುದ್ದೆ

ಈ ಹುದ್ದೆಗಳ ಪೈಕಿ ಅಧೀನ ಕಾರ್ಯದರ್ಶಿ ಹುದ್ದೆಯನ್ನು ಗುತ್ತಿಗೆ ಆಧಾರದ ಮೇರೆಗೆ ಭರ್ತಿ ಮಾಡಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 1100

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾ ಪ್ರಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪತ್ರ ಸಂಖ್ಯೆ:ಡಿಪಿಎನ್:ಡಿಡಬ್ಲ್ಯೂಆರ್:764:2001, ದಿನಾಂಕ:18-10-01.
2. ಸರ್ಕಾರದ ಪತ್ರ ಸಮಸಂಖ್ಯೆ: , ದಿನಾಂಕ: 18-9-02.
3. ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪತ್ರ ಸಂಖ್ಯೆ:ಡಿಪಿಎನ್:ಡಿಡಬ್ಲ್ಯೂಆರ್:764:2001, ದಿನಾಂಕ: 13-12-02.
4. ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 397 ಪಿಪಿಇ 01, ದಿನಾಂಕ: 10-1-03.
5. ಆರೋಪಿತ ಅಧಿಕಾರಿಯವರ ಸಮಜಾಯಿಷಿ ದಿನಾಂಕ:29-1-03.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸುತ್ತಾ, ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ, ರವರು ಸದರಿ ನ್ಯಾಯಾಲಯದಲ್ಲಿ ಎಸ್.ಸಿ.ಸಂಖ್ಯೆ:146:99 ರ ಮೊಕದ್ದಮೆಯನ್ನು ನಡೆಸುವ ಸಮಯದಲ್ಲಿ ಪ್ರಾ.ಸಾ. 2 ರಿಂದ 6 ಇವರುಗಳು ಮೊಕದ್ದಮೆಯ ಪ್ರಮುಖ ಸಾಕ್ಷಿಗಳು ಹಾಗೂ ಮೃತಳ ಸಂಬಂಧಿಕರಿದ್ದು, ಅವರುಗಳು ಮುಖ್ಯ ವಿಚಾರಣೆಯಲ್ಲಿ ಅಭಿಯೋಜನೆ ಪಕ್ಷದ ಪ್ರಕಾರ ಸಾಕ್ಷ್ಯ ನುಡಿದಿದ್ದು, ಆರೋಪಿ ಪರವಾಗಿ ಪಾಟೀಸವಾಲು ಮಾಡುವ ಕಾಲಕ್ಕೆ ಅಭಿಯೋಜನೆ ಪಕ್ಷದ ಕೇಸಿಗೆ ಸಂಪೂರ್ಣವಾಗಿ ವಿರುದ್ಧ ಸಾಕ್ಷ್ಯವನ್ನು ನುಡಿದಿದ್ದರೂ ಸಹಾ ಸದರಿ ಸಾಕ್ಷಿಗಳನ್ನು ಪ್ರತಿಕೂಲ ಸಾಕ್ಷಿಗಳನ್ನಾಗಿ ಪರಿಗಣಿಸಿ ಪಾಟೀ ಸವಾಲು ಮಾಡದೇ, ಸದರಿ ಪ್ರಕರಣದ ವಿಚಾರಣಾ ಸಮಯದಲ್ಲಿ ನ್ಯಾಯಾಲಯದಲ್ಲಿ ಪ್ರತಿಜ್ಞೆ ಮೇರೆಗೆ ಮುಖ್ಯ ವಿಚಾರಣೆಯಲ್ಲಿ ನುಡಿದ ಸಾಕ್ಷ್ಯಕ್ಕೆ ವಿರುದ್ಧವಾಗಿ ಆರೋಪಿ ಪರ ವಕೀಲರು ಪಾಟೀಸವಾಲಿನ ಸಮಯಕ್ಕೆ ವಿರುದ್ಧ ಸಾಕ್ಷ್ಯವನ್ನು ನುಡಿದಿರುವುದರಿಂದ, ಸದರಿ ಸಾಕ್ಷಿಗಳು ನ್ಯಾಯಾಲಯದ ಮುಂದೆ ಸುಳ್ಳುಸಾಕ್ಷ್ಯ ನುಡಿದಿರುವುದು ವ್ಯಕ್ತವಾಗಿದ್ದರೂ ಸಹ ಅವರುಗಳ ಮೇಲೆ ಶಿಕ್ಷಾರ್ಹ ಅಪರಾಧಕ್ಕಾಗಿ ಯಾವುದೇ ಕ್ರಮ ಕೈಗೊಳ್ಳದೇ, ನ್ಯಾಯಾಲಯಕ್ಕೆ ಈ ಬಗ್ಗೆ ಅರ್ಜಿ ಸಲ್ಲಿಸದೇ, ಹಾಗೂ ಸದರಿ ಪ್ರಕರಣಕ್ಕೆ ಸಂಬಂಧಿಸಿದಂತೆ ಯು.ಡಿ.ಆರ್.ಸಂ.2:99 ರಲ್ಲಿ ಮೊಕದ್ದಮೆ

ಮೊದಲು ದಾಖಲಾಗಿದ್ದುದು ಕಂಡು ಬಂದಿದ್ದು, ಈ ಕುರಿತು ಯು.ಡಿ.ಆರ್.ಸಂ.2: 99ರ ಮೊಕದ್ದಮೆಗೆ ಸಂಬಂಧಿಸಿದ ಫಿರ್ಯಾದು, ಪ್ರಥಮ ವರ್ತಮಾನ ವರದಿ ಮತ್ತು ಸಂಗ್ರಹಿಸಿದ ಸಾಕ್ಷ್ಯಾಧಾರಗಳನ್ನು ನ್ಯಾಯಾಲಯದಲ್ಲಿ ಹಾಜರುಪಡಿಸದೇ ಬೇಜವಾಬ್ದಾರಿತನದಿಂದ ವರ್ತಿಸಿ, ಕರ್ತವ್ಯ ಲೋಪ ಎಸಗಿ, ಕೆಸಿಎಲ್ (ನಡತೆ) ನಿಯಮಾವಳಿ 1966ರ ನಿಯಮ 3(11) ಮತ್ತು 3(111)ನ್ನು ಉಲ್ಲಂಘಿಸಿರುವುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪರಿಶೀಲಿಸಿ, ಸದರಿ ಅಧಿಕಾರಿಯವರ ವಿರುದ್ಧ ಶಿಸ್ತು ಜರುಗಿಸುವ ಸಂಬಂಧ ಮೇಲೆ ಓದಲಾದ (2)ರ ಪತ್ರದಲ್ಲಿ ಕರಡು ದೋಷಾರೋಪಣಾ ಪಟ್ಟಿಯನ್ನು ರಚಿಸಿ ಸಲ್ಲಿಸುವಂತೆ ಸೂಚಿಸಿದ್ದರ ಮೇರೆಗೆ ಮೇಲೆ ಓದಲಾದ (3)ರ ಪತ್ರದಲ್ಲಿ ಕರಡು ದೋಷಾರೋಪಣಾ ಪಟ್ಟಿಯನ್ನು ಅಭಿಯೋಗ ನಿರ್ದೇಶಕರು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಕೆಸಿಎಸ್(ಸಿಸಿಎ) ನಿಯಮಾವಳಿ 1957ರ ನಿಯಮ 11ರ ಮೇರೆಗೆ ಮೇಲೆ ಓದಲಾದ (4)ರ ಪತ್ರದಲ್ಲಿ ಆರೋಪಿತರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಅನುಬಂಧ-1 ರಿಂದ 4 ರವರೆಗೆ ದಿನಾಂಕ:23-1-03 ರಂದು ಜಾರಿಮಾಡಿ ದೋಷಾರೋಪಗಳನ್ನು ಒಪ್ಪುವ ಅಥವಾ ನಿರಾಕರಿಸುವ ಬಗ್ಗೆ ಪ್ರತಿವಾದದ ಲಿಖಿತ ಹೇಳಿಕೆಯನ್ನು ನಿಗದಿತ ಅವಧಿಯೊಳಗೆ ಸರ್ಕಾರಕ್ಕೆ ಸಲ್ಲಿಸುವಂತೆ ತಿಳಿಯಪಡಿಸಲಾಗಿತ್ತು.

ಮೇಲೆ ಓದಲಾದ (5)ರಲ್ಲಿ ಆರೋಪಿತ ಅಧಿಕಾರಿಯು ತಮ್ಮ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ ತಮ್ಮ ಮೇಲಿನ ಎಲ್ಲಾ 3 ಆರೋಪಗಳನ್ನು ಅಲ್ಲಗಳೆದು, ಮುಂದಿನ ವಿಚಾರಣೆಯನ್ನು ಕೈಬಿಡಬೇಕೆಂದು ಕೋರಿರುತ್ತಾರೆ.

ಆದ್ದರಿಂದ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಸದರಿ ಆರೋಪಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆಯನ್ನು ಕೈಗೊಳ್ಳಲು ನಿರ್ಧರಿಸಿ ಕೆಳಕಂಡಂತೆ ಸರ್ಕಾರವು ವಿಚಾರಣಾ ಪ್ರಾಧಿಕಾರಿಯನ್ನು ಹಾಗೂ ಮಂಡನಾಧಿಕಾರಿಯವರನ್ನು ನೇಮಿಸಿ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 397 ಪಿಪಿಇ 2001, ಬೆಂಗಳೂರು, ದಿನಾಂಕ: 24ನೇ ಜೂನ್ 2003**

ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ, ಇವರ ವಿರುದ್ಧದ ಆಪಾದನೆಗಳ ಬಗ್ಗೆ 1957ರ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 11ನೇ ನಿಯಮದ ಉಪ ನಿಯಮ(2) ರನ್ವಯ ಹಾಗೂ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಆದೇಶ ಸಂಖ್ಯೆ:ಸಿಆಸುಇ 3 ಸೇಇವಿ 96 ದಿನಾಂಕ:24-4-98 ರನ್ವಯ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11 ಮತ್ತು 11(ಎ) ರನ್ವಯ ಪ್ರತಿ ಪ್ರಕರಣಕ್ಕೆ ರೂ.5,000 (ರೂ.ಐದು ಸಾವಿರ ಮಾತ್ರ)ಗಳ ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣಕ್ಕೆ ರೂ.1,000 (ರೂ.ಒಂದು ಸಾವಿರ ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ಶ್ರೀಯುತ: ಶ್ರೀಮತಿ ವಿ.ಎನ್. ಆರತಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮುಖ್ಯರಸ್ತೆ, ಗಾಂಧಿನಗರ, ಧಾರವಾಡ, ಇವರನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಿಚಾರಣಾ ಪ್ರಾಧಿಕಾರಿಯನ್ನಾಗಿ ಸರ್ಕಾರ ನೇಮಿಸಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ದಾಖಲೆಗಳನ್ನು ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ11(5)(ಸಿ) ರನ್ವಯ ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಧಾರವಾಡ, ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿದೆ.

**ಷರತ್ತುಗಳು:**

1) ಪ್ರಕರಣದ ವಿಚಾರಣೆಯನ್ನು ಸರ್ಕಾರಿ ಅಭಿಯೋಜಕರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಧಾರವಾಡ ಇವರ ಕಛೇರಿಯಲ್ಲಿ ನಡೆಸತಕ್ಕದ್ದು.
2) ವಿಚಾರಣಾ ಪ್ರಾಧಿಕಾರಿಯವರಿಗೆ ಇಲಾಖಾ ವಿಚಾರಣೆ ಮುಕ್ತಾಯವಾಗುವವರೆಗೆ ಸರ್ಕಾರಿ ಅಭಿಯೋಜಕರು ಧಾರವಾಡ ರವರು ತಮ್ಮ ಕಛೇರಿಯಲ್ಲಿ ಲಭ್ಯವಿರುವ ಬೆರಳಚ್ಚುಗಾರರ:ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸುವ ಜೊತೆಗೆ ಅಗತ್ಯ ಲೇಖನ ಸಾಮಗ್ರಿ ಸಹ ಒದಗಿಸತಕ್ಕದ್ದು.
3) ಇಲಾಖಾ ವಿಚಾರಣೆಯನ್ನು 2 ತಿಂಗಳೊಳಗಾಗಿ ಪೂರೈಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4) ಅಭಿಯೋಗ ನಿರ್ದೇಶಕರು, ಬೆಂಗಳೂರು, ರವರು ರೂ.5,000(ರೂ.ಐದು ಸಾವಿರ ಮಾತ್ರ) ಸಂಚಿತ ಸಂಭಾವನೆ ಮತ್ತು ರೂ.1,000 (ರೂ ಒಂದು ಸಾವಿರ ಮಾತ್ರ) ವಾಹನ ಭತ್ಯೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿ ಕಛೇರಿ ವೇತನದ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 1101

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾನೂನು ಇಲಾಖೆ (ಆಡಳಿತ-2).

**ಕಂದಾಯ ಸಚಿವಾಲಯ**

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 39 ಎಡಿಇ 2003, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

**ವಿಷಯ:** ಶ್ರೀ ಬಿ. ಶಿವರಾಜ್, ವಿಶೇಷ ತಹಶೀಲ್ದಾರ್, ನಿಡಗುಂದಿ, ಬಿಜಾಪುರ ಜಿಲ್ಲೆ ಎಂದು ನೇಮಕಾತಿ ಆದೇಶದಲ್ಲಿರುವ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

ಸರ್ಕಾರದ ಅಧಿಸೂಚನೆ ಸಂಖ್ಯೆ:ಕಂಇ 06 ಎಟಿಎಸ್ 03, ದಿನಾಂಕ:22-5-03ರಲ್ಲಿ ಶ್ರೀ ಬಿ. ಶಿವರಾಜ್, ತಹಶೀಲ್ದಾರ್, ಇವರನ್ನು ಬಿಜಾಪುರ ಜಿಲ್ಲೆಯ ನಿಡಗುಂದಿ ಇಲ್ಲಿಗೆ ವಿಶೇಷ ತಹಶೀಲ್ದಾರ್‌ರನ್ನಾಗಿ ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿರುತ್ತದೆ. ಆದರೆ ಸದರಿ ತಹಶೀಲ್ದಾರರು ಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿರುವ ಈ ಹುದ್ದೆಯಲ್ಲಿ ಸುಮಾರು 3 ತಿಂಗಳು ಕಳೆದರೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ ಹಾಗೂ ಅಂತಹ ಗೈರು ಹಾಜರಾತಿಗೆ ಸಕಾರಣಗಳನ್ನೊಳಗೊಂಡ ಯಾವುದೇ ಅರ್ಜಿಯನ್ನು ಸಲ್ಲಿಸದೆ ಅನಧಿಕೃತವಾಗಿ ಗೈರು ಹಾಜರಾಗಿ ಕರ್ತವ್ಯಲೋಪ ಎಸಗಿರುವುದು ಸರ್ಕಾರದ ಗಮನಕ್ಕೆ ಬಂದಿದ್ದು ಇವರು 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳ ನಿಯಮ 3ನ್ನು ಉಲ್ಲಂಘಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರನ್ನು ಸೇವೆಯಿಂದ ಅಮಾನತ್ತುಗೊಳಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಅಧಿಕಾರಿಯ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1102

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಡಿ.ಕೆ.ತೊರವಿ, ಜಿಲ್ಲಾ ನೋಂದಣಾಧಿಕಾರಿಗಳು, ಬಿಜಾಪುರ ಜಿಲ್ಲೆ, ಬಿಜಾಪುರ (ಹಾಲಿ ನಿವೃತ್ತ)- ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 5898/1998 ರಲ್ಲಿ ಆದೇಶ ಜಾರಿ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಇಎಸ್‌ಎಂ 87 (ಭಾಗ I) ದಿನಾಂಕ: 5.5.1998.
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಆದೇಶ ಅರ್ಜಿ ಸಂಖ್ಯೆ: 5898/1998ರಲ್ಲಿ ದಿನಾಂಕ: 3.12.2002.

**ಪ್ರಸ್ತಾವನೆ:**

ಶ್ರೀ ಡಿ.ಕೆ. ತೊರವಿ ಈ ಹಿಂದೆ ಉಪ ನೋಂದಣಾಧಿಕಾರಿಯಾಗಿ ದಾವಣಗೆರೆ ಉಪ ನೋಂದಣಿ ಕಛೇರಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾಗ ಸದರಿಯವರು 175 ದಸ್ತಾವೇಜುಗಳಲ್ಲಿ ನಿಯಮಾನುಸಾರ ಮಾರುಕಟ್ಟೆ ಬೆಲೆಗನುಸಾರವಾಗಿ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಫೀ ಒಟ್ಟು 2,19,600-00 ರೂ.ಗಳ ರಾಜಸ್ವ ಹಾನಿ ಮಾಡಿದ್ದಾರೆಂಬ ಆರೋಪವು ಇಲಾಖಾ ವಿಚಾರಣಾ ವರದಿಯಿಂದ ಸಾಬೀತಾಗಿದ್ದರಿಂದ ಮೇಲೆ ಓದಲಾದ (1)ರ ದಿನಾಂಕ: 5.5.98 ರ ಆದೇಶದಲ್ಲಿ ಆಪಾದಿತ ಅಧಿಕಾರಿಯಿಂದ 2,19,600-00 ರೂ.ಗಳ ವಸೂಲಾತಿ ಹಾಗೂ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 8 (iii) ರ ಪ್ರಕಾರ ಶ್ರೀ ಡಿ.ಕೆ. ತೊರವಿ ಅವರ ಮುಂದಿನ ಮೂರು ವರ್ಷಗಳ ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮ ಇಲ್ಲದಂತೆ ತಡೆಹಿಡಿಯುವ ಆದೇಶ ಮಾಡಲಾಗಿತ್ತು.

ಸದರಿ ಆದೇಶದ ವಿರುದ್ಧ ಶ್ರೀ ಡಿ.ಕೆ. ತೊರವಿ ಅವರು ಮೇಲೆ ಓದಲಾದ (2)ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು, ಸದರಿ ಅರ್ಜಿ ಸಂಖ್ಯೆ:5898/1998ರಲ್ಲಿ ದಿನಾಂಕ: 3.12.2002 ರಂದು ನೀಡಿದ ಆದೇಶದ ಭಾಗ-4 ರಲ್ಲಿ ಈ ಕೆಳಗಿನಂತೆ ಆದೇಶಿಸಿದೆ.

"It is clearly case of no evidence to support the charges levelled against the applicant. Annexure A 7 bearing No. ಕಂಇ 25 ಇಎಸ್‌ಎಂ 87 (ಭಾಗ-1) dated: 5.5.1998 is therefore struct down as without the authority of law and is accordingly done. Consequently, the applicant shall be entitled to all the consequential benefits flowing from the quashing of the order Annexure-A7."

ಕೆ.ಎ.ಟಿ.ಯು ದಿನಾಂಕ: 3.12.2002 ರಂದು ನೀಡಿದ ಆದೇಶದ ಮೇಲೆ ಮೇಲ್ಮನವಿ ಸಲ್ಲಿಸಲು ಸರ್ಕಾರಿ ವಕೀಲರ ಮತ್ತು ಕಂದಾಯ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರ ಅಭಿಪ್ರಾಯ ನೀಡುತ್ತಾ ಈ ಪ್ರಕರಣವು ಮೇಲ್ಮನವಿ ಸಲ್ಲಿಸಲು ಅರ್ಹ ಪ್ರಕರಣವಲ್ಲವೆಂದು ಹೇಳಿದ್ದರಿಂದ ಸರ್ಕಾರವು ಆದೇಶದ ವಿರುದ್ಧ ಮೇಲ್ಮನವಿಯನ್ನು ಕೈಬಿಟ್ಟು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 12 ಮುನೋಸೇ (2) 2003, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಡಿ.ಕೆ. ತೊರವಿ, ಹಿಂದಿನ ಉಪ ನೋಂದಣಾಧಿಕಾರಿ, ದಾವಣಗೆರೆ ಉಪ ನೋಂದಣಿ ಕಛೇರಿ, ಹಾಲಿ ನಿವೃತ್ತ ಜಿಲ್ಲಾ ನೋಂದಣಾಧಿಕಾರಿ ಇವರ ವಿರುದ್ಧ ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಇಎಸ್‌ಎಂ 87 (ಭಾಗ I), ದಿನಾಂಕ: 5.5.98 ರಂದು ಹೊರಡಿಸಿದ ಆದೇಶದಲ್ಲಿ ಸದರಿ ಅಧಿಕಾರಿಗಳಿಂದ ರೂ. 2,19,600-00 (ಎರಡು ಲಕ್ಷ ಹತ್ತೊಂಭತ್ತು ಸಾವಿರದ ಆರು ನೂರು ರೂಪಾಯಿಗಳು) ಗಳ ವಸೂಲಾತಿ ಹಾಗೂ ಮುಂದಿನ 3 ವರ್ಷಗಳ ವಾರ್ಷಿಕ ವೇತನ ಬಡ್ತಿ ಸಂಚಿತ ಪರಿಣಾಮವಿಲ್ಲದಂತೆ ತಡೆಹಿಡಿಯುವ ಆದೇಶವನ್ನು ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 5898/1998 ದಿನಾಂಕ: 3.12.2002 ರಲ್ಲಿ ರದ್ದುಗೊಳಿಸಿರುವುದರಿಂದ, ಸದರಿ ಆದೇಶವನ್ನು ಹಿಂದಕ್ಕೆ ಪಡೆಯಲಾಗಿದೆ. ಈ ಅಧಿಕಾರಿಯ ವಿರುದ್ಧ ದಿನಾಂಕ: 5.5.98 ರಂದು ಹೊರಡಿಸಿದ ಆದೇಶ ಹೊರಡಿಸದೇ ಇದ್ದರೆ, ಅವರಿಗೆ ಸಿಗುತ್ತಿದ್ದ ಎಲ್ಲ ಸೌಲಭ್ಯಗಳಿಗೆ ಹಕ್ಕುದಾರರಾಗಿರುತ್ತಾರೆ ಎಂದು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1103

**ಸಿ. ಚನ್ನೇಗೌಡ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಡಿ.ಐ.ಜಿ. ವೃಂದದಲ್ಲಿ ಒಂದು ಸೂಪರ್ ನ್ಯೂಮರರಿ ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳು ಆಯುಕ್ತರು, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಬ್ಬಂದಿ 1-54:2003-04, ದಿನಾಂಕ:4.7.2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ ದಿನಾಂಕ: 4.7.2003 ರಲ್ಲಿ ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು ಸರ್ಕಾರವು ಅಧಿಸೂಚನೆ ಸಂಖ್ಯೆ: ಕಂಇ 57 ಮುನೋಸೇ(1) 2000, ದಿನಾಂಕ: 28.6.2002 ರಲ್ಲಿ ಶ್ರೀ ಸಿ.ಎಂ. ಪಾಟೀಲ್, ಜಿಲ್ಲಾ ನೋಂದಣಾಧಿಕಾರಿಗಳು ಇವರಿಗೆ ಉಪ ನೋಂದಣಿ ಮಹಾಪರಿವೀಕ್ಷಕರೆಂದು ಮುಂಬಡ್ತಿ ನೀಡಿ ಕೇಂದ್ರ ಕಛೇರಿ, ಬೆಂಗಳೂರು ಇಲ್ಲಿಗೆ ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು) ಹುದ್ದೆಗೆ ನೇಮಕ ಮಾಡಿದ್ದು ಅದರಂತೆ ಅವರು ದಿನಾಂಕ: 8.7.2002 ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು ತಿಳಿಸಿರುತ್ತಾರೆ. ನಂತರ ಅಧಿಸೂಚನೆ ಸಂಖ್ಯೆ: ಕಂಇ 18 ಮುನೋಸೇ (2) 2003, ದಿನಾಂಕ: 7.5.2003 ರಲ್ಲಿ ಶ್ರೀ ಸಿ.ಎಂ. ಪಾಟೀಲ್, ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು) ಇವರನ್ನು ಹಿಂಬಡ್ತಿಗೊಳಿಸಿ ಜಿಲ್ಲಾ ನೋಂದಣಿ ಕಛೇರಿ, ಹಾವೇರಿ ಇಲ್ಲಿಗೆ ನಿಯುಕ್ತಿ ಮಾಡಲಾಗಿತ್ತು. ಮತ್ತು ಅವರ ಜಾಗದಲ್ಲಿ ಶ್ರೀ ಎಸ್.ವೈ. ಜಾವಡಗಿ, ಜಿಲ್ಲಾ ನೋಂದಣಾಧಿಕಾರಿಗಳು, ಗದಗ ಅವರಿಗೆ ಮುಂಬಡ್ತಿ ನೀಡಿ ಉಪ ನೋಂದಣಿ ಮಹಾಪರಿವೀಕ್ಷಕರು (ಆಡಳಿತ ಮತ್ತು ಕಾನೂನು) ಹುದ್ದೆಗೆ ಸ್ಥಳ ನಿಯುಕ್ತಿ ಮಾಡಲಾಗಿತ್ತು. ಅದರಂತೆ ಅವರು ದಿನಾಂಕ:9.5.2003 ರಂದು ಈ ಹುದ್ದೆಯ ಪ್ರಭಾರ ತೆಗೆದುಕೊಂಡಿರುತ್ತಾರೆ. ಶ್ರೀ ಸಿ.ಎಂ. ಪಾಟೀಲ್, ಹಾಲಿ ಜಿಲ್ಲಾ ನೋಂದಣಾಧಿಕಾರಿಗಳೆಂದು ಹಿಂಬಡ್ತಿಗೊಂಡಿರುವ ಅವರು ದಿನಾಂಕ:31.10.2003 ರಂದು ಸರ್ಕಾರಿ ಸೇವೆಯಿಂದ ವಯೋ ನಿವೃತ್ತಿ ಹೊಂದಲಿದ್ದಾರೆ. ಮುಂದುವರೆದು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರು ತಿಳಿಸಿರುವಂತೆ ಇಲಾಖೆಯಲ್ಲಿ ಮಹತ್ತರ ಬದಲಾವಣೆಗಳಾಗುತ್ತಿವೆ. ಇವುಗಳಲ್ಲಿ,

1. ಕಂಪ್ಯೂಟರೀಕರಣ
2. ಕಾಯ್ದೆ, ನಿಯಮಗಳ ತಿದ್ದುಪಡಿ
3. ಕೇಂದ್ರ ಮಾರುಕಟ್ಟೆ ಬೆಲೆ ಸಮಿತಿ ಕೆಲಸ

ಈ ಮೇಲಿನ ಮಹತ್ತರ ಕೆಲಸಗಳನ್ನು ಪೂರ್ಣಗೊಳಿಸಲು ಹಿರಿಯ ಅಧಿಕಾರಿಗಳ ಸೇವೆಯ ಅವಶ್ಯಕತೆ ಇರುತ್ತದೆ. ಆದ್ದರಿಂದ ಶ್ರೀ ಸಿ.ಎಂ. ಪಾಟೀಲ್ ರವರ ಸೇವಾ ಹಿರಿತನ ಮತ್ತು ಅವರ ದಕ್ಷತೆಗಳನ್ನು ಗಮನದಲ್ಲಿಟ್ಟುಕೊಂಡು ಮತ್ತು ಅವರು ದಿನಾಂಕ:31.10.2003 ರಂದು ವಯೋ ನಿವೃತ್ತಿ ಹೊಂದುತ್ತಿರುವುದರಿಂದ ಒಂದು ಹೆಚ್ಚುವರಿ ಉಪ ನೋಂದಣಿ ಮಹಾಪರಿವೀಕ್ಷಕರ ಹುದ್ದೆಯನ್ನು ಸೃಷ್ಟಿಸಿ ಅವರನ್ನು ಆ ಹುದ್ದೆಯಲ್ಲಿ ಮುಂದುವರೆಸಬಹುದೆಂದು ನೋಂದಣಿ ಮಹಾಪರಿವೀಕ್ಷಕರು ಶಿಫಾರಸ್ಸು ಮಾಡಿರುತ್ತಾರೆ. ದಿನಾಂಕ: 31.10.2003 ರ ನಂತರ ಈ ಹೆಚ್ಚುವರಿ ಉಪ ನೋಂದಣಿ ಮಹಾಪರಿವೀಕ್ಷಕರ ಹುದ್ದೆಯನ್ನು ರದ್ದುಪಡಿಸಲಾಗುವುದು. ಈ ಹೆಚ್ಚುವರಿ ಉಪ ನೋಂದಣಿ ಮಹಾಪರಿವೀಕ್ಷಕರ ಹುದ್ದೆಯನ್ನು ಸೃಷ್ಟಿಸುವುದರಿಂದ ಸರ್ಕಾರಕ್ಕೆ ಯಾವುದೇ ಹೆಚ್ಚುವರಿ ಖರ್ಚು ತಗಲುವುದಿಲ್ಲವೆಂದು ನೋಂದಣಿ ಮಹಾಪರಿವೀಕ್ಷಕರು ತಿಳಿಸಿ ಈ ಹುದ್ದೆಯನ್ನು ಸೃಜಿಸಲು ಕೋರಿರುತ್ತಾರೆ.

ನೋಂದಣಿ ಮಹಾಪರಿವೀಕ್ಷಕರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 12 ಮುನೋಸೇ(1) 2003, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ತಿಳಿಸಿರುವ ಹಾಗೂ ಆಡಳಿತಾತ್ಮಕ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಸಿ.ಎಂ. ಪಾಟೀಲ್‌ರಿಗೆ ಕಾರ್ಯನಿರ್ವಹಿಸಲು ಅನುಕೂಲವಾಗುವಂತೆ ಒಂದು ಉಪ ನೋಂದಣಿ ಮಹಾಪರಿವೀಕ್ಷಕರ ಸೂಪರ್ ನ್ಯೂಮರರಿ ಹುದ್ದೆಯನ್ನು ದಿನಾಂಕ:7.5.2003 ರಿಂದ 31.10.2003 ರವರೆಗೆ ಸೃಜಿಸಲಾಗಿದೆ. ಸದರಿ ಹುದ್ದೆಯು ಶ್ರೀ ಸಿ.ಎಂ. ಪಾಟೀಲ್‌ರ ನಿವೃತ್ತಿಯೊಂದಿಗೆ ಕೊನೆಗೊಳ್ಳಲಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಅವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 1021 ವೆಚ್ಚ-7:2003, ದಿನಾಂಕ: 22.8.2003 ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶೈಲಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

ಪಿ.ಆರ್. 1104

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 40 ಎಡಿಇ 2003, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

**ವಿಷಯ:** ಶ್ರೀ ರಾಮಲಿಂಗಪ್ಪ, ತಹಶೀಲ್ದಾರ್, ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

ಶ್ರೀ ರಾಮಲಿಂಗಪ್ಪ, ತಹಶೀಲ್ದಾರ್, ಹಿರೇಕೆರೂರು ತಾಲ್ಲೂಕು, ಇವರು ತಮ್ಮ ಜನ್ಮ ದಿನಾಂಕದ ಬಗ್ಗೆ ಸರ್ಕಾರಕ್ಕೆ ತಪ್ಪು ಮಾಹಿತಿ ನೀಡಿ ವಾಸ್ತವಾಂಶವನ್ನು ಮರೆಮಾಚಿ ಸೇವೆಯಲ್ಲಿ ಇನ್ನೂ ಒಂದು ವರ್ಷ ಮುಂದುವರೆಯುವ ಹುನ್ನಾರ ನಡೆಸಿದ್ದು, ಈ ಕೃತ್ಯವೆಸಗಿ ಇವರು 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿಗಳ ನಿಯಮ 3ನ್ನು ಉಲ್ಲಂಘಿಸಿರುವುದರಿಂದ ಸದರಿ ಅಧಿಕಾರಿಯನ್ನು ದಿನಾಂಕ: 29-8-2003ರ ಅಪರಾಹ್ನದಿಂದ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಮುಂದುವರೆದು ಶ್ರೀ ರಾಮಲಿಂಗಪ್ಪ, ಇವರನ್ನು ಹಿರೇಕೆರೂರು ತಹಶೀಲ್ದಾರ್ ಹುದ್ದೆಯಿಂದ ಇಂದೇ ಬಿಡುಗಡೆಗೊಳಿಸಲು ಜಿಲ್ಲಾಧಿಕಾರಿಗಳು, ಹಾವೇರಿ ಜಿಲ್ಲೆ ರವರು ಕ್ರಮವಹಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 1106

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್, ಕೋಲಾರ ತಾಲ್ಲೂಕು ಕೋಲಾರ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಓದಲಾಗಿದೆ:** ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಬೆಂಗಳೂರು ಇವರ 16-7-2003ರ ಪತ್ರ ಸಂಖ್ಯೆ: ಎಲ್‌ಒಕೆ/ಐಎನ್‌ವಿ(ಜಿ) ಬಿಡಿ-6/ಸಿಆರ್-4/2003/ಕೆಎಲ್‌ಆರ್.

**ಪ್ರಸ್ತಾವನೆ:**

ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರು ಕೋಲಾರ ತಾಲ್ಲೂಕಿನ ಜನ್ನಘಟ್ಟ ಗ್ರಾಮದ ಸರ್ವೆ ನಂ. 275 ರಲ್ಲಿ ಫಿರ್ಯಾದುದಾರರಾದ ಶ್ರೀ ಗೋಪಾಲಕೃಷ್ಣ ಎಂಬುವವರ ಚಿಕ್ಕಪ್ಪನ ಹೆಸರಿನಲ್ಲಿರುವ ಜಮೀನಿನಲ್ಲಿ ಇಟ್ಟಿಗೆ ಕಾರ್ಖಾನೆಯನ್ನು ಸ್ಥಾಪಿಸಲು ಭೂಪರಿವರ್ತನೆ ಮಾಡುವುದಕ್ಕೆ 20,000/-ರೂಗಳ ಅಕ್ರಮ ಸಂಭಾವನೆಯನ್ನು ಒತ್ತಾಯಿಸಿದ್ದು, ಆ ಮೊತ್ತದಲ್ಲಿ 10,000/-ರೂಗಳನ್ನು ಅಕ್ರಮ ಸಂಭಾವನೆಯಾಗಿ ಫಿರ್ಯಾದುದಾರರಿಂದ ದಿನಾಂಕ:27-6-2003 ರಂದು ಕೇಳಿ ಪಡೆಯುತ್ತಿದ್ದಾಗ ಲಂಚದ ಹಣದೊಡನೆ ಸಿಕ್ಕಿಬಿದ್ದಿರುವುದರಿಂದ ಅವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದಾಗಿ ತಿಳಿಸಿ, ಸದರಿ ಆರೋಪಿತರು ಸುಗಮ ತನಿಖೆಗೆ ಅಡ್ಡಿ ಉಂಟು ಮಾಡಿ ಹಸ್ತಕ್ಷೇಪ ಮಾಡುವ ಹಾಗೂ ಅವರ ವಿರುದ್ಧ ಇರುವ ಸಾಕ್ಷಿ ಪುರಾವೆಗಳನ್ನು ನಾಶಗೊಳಿಸುವ ಸಾಧ್ಯತೆಗಳಿರುವುದರಿಂದ ಸದರಿ ಆರೋಪಿತ ಅಧಿಕಾರಿಯನ್ನು ಕೂಡಲೇ ಸೇವೆಯಿಂದ ಅಮಾನತ್ತುಗೊಳಿಸಿ ಅವರ ಲೀನ್ (ಸ್ಥಾನವನ್ನು) ಬೇರೆ ಕಡೆಗೆ ವರ್ಗಾಯಿಸುವಂತೆ ಆರಕ್ಷಕ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಪೊಲೀಸ್ ವಿಭಾಗ, ಬೆಂಗಳೂರು ಇವರು ಮೇಲೆ ಓದಲಾದ ದಿನಾಂಕ 16-7-2003ರ ಪತ್ರದಲ್ಲಿ ಕೋರಿರುತ್ತಾರೆ. ಸದರಿ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂಖ್ಯೆ:ಕಂಇ 21 ಎಡಿಇ 2003, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2003

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ ನಿಯಮ 10(1) (a)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ವೈ.ಬಿ. ಕೃಷ್ಣ, ತಹಶೀಲ್ದಾರ್, ಕೋಲಾರ ತಾಲ್ಲೂಕು, ಕೋಲಾರ ಇವರನ್ನು ಇವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಬಾಕಿ ಇಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಅಧಿಕಾರಿಯ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1105

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

### ಸರ್ಕಾರದ ಆದೇಶ ಸಂಖ್ಯೆ: ಕಂಇ 23 ಎಡಿಇ 2003, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003

**ವಿಷಯ:** ಶ್ರೀ ಲಾಲ್‌ಸಿಂಗ್ ನಾಯಕ್, ತಹಶೀಲ್ದಾರ್, ಯಲಬುರ್ಗಾ ತಾಲ್ಲೂಕು, ಕೊಪ್ಪಳ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

ಶ್ರೀ ಲಾಲ್‌ಸಿಂಗ್ ನಾಯಕ್, ತಹಶೀಲ್ದಾರ್, ಯಲಬುರ್ಗಾ ತಾಲ್ಲೂಕು ಇವರು ಏಪ್ರಿಲ್ ಮತ್ತು ಮೇ 2003ನೇ ತಿಂಗಳಿನಲ್ಲಿ ತಮ್ಮ ಹುದ್ದೆಯ ಚಾರ್ಜನ್ನು ಯಾರಿಗೂ ವಹಿಸಿಕೊಡದೆ ಹಾಗೂ ಮೇಲಾಧಿಕಾರಿಗಳ ಅನುಮತಿ ಪಡೆಯದೆ ಅನಧಿಕೃತವಾಗಿ ಗೈರುಹಾಜರಾಗಿದ್ದು, ಅಲ್ಲದೆ ಗಂಗಾವತಿಯಲ್ಲಿ ಬರಗಾಲ ಕಾಮಗಾರಿ ಕುರಿತು ಮಾನ್ಯ ಜಿಲ್ಲಾ ಉಸ್ತುವಾರಿ ಮಂತ್ರಿ ಹಾಗೂ ಸರ್ಕಾರದ ಉಸ್ತುವಾರಿ ಕಾರ್ಯದರ್ಶಿಗಳು ನಡೆಸಿದ ಸಭೆಯಲ್ಲೂ ಸಹ ಹಾಜರಾಗಿರುವುದಿಲ್ಲ. ಹಾಗೂ ಈ ಬಗ್ಗೆ ಯಾವುದೇ ಸ್ಪಷ್ಟೀಕರಣ ನೀಡಿರುವುದಿಲ್ಲ. ಮುಂದುವರೆದು ದಿನಾಂಕ: 1-6-2003 ರಂದು ಕುಕನೂರು ಪ್ರವಾಸಿ ಮಂದಿರದಲ್ಲಿ ಮಾನ್ಯ ಕೇಂದ್ರ ಸಚಿವರು ಬರುತ್ತಿರುವುದರಿಂದ ಪ್ರವಾಸಿ ಮಂದಿರದಲ್ಲಿ ಹಾಜರಾಗಲು ತಿಳಿಸಿದ್ದಾಗ್ಯೂ ಸಹ ಹಾಜರಾಗದೆ ಬೇಜವಾಬ್ದಾರಿತನದಿಂದ ವರ್ತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಮುಂದುವರೆದು ಈ ತಾಲ್ಲೂಕಿನ ಅಭಾವ ಪರಿಹಾರ ಕಾರ್ಯಗಳ ಮೇಲ್ವಿಚಾರಣೆ ಮತ್ತು ಅನುಷ್ಠಾನಗೊಳಿಸುವಲ್ಲಿ ಸಹ ನಿರ್ಲಕ್ಷತೆಯಿಂದ ವರ್ತಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆ.

ಈ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ಲಾಲ್‌ಸಿಂಗ್ ನಾಯಕ್, ತಹಶೀಲ್ದಾರ್, ಯಲಬುರ್ಗಾ ತಾಲ್ಲೂಕು ಇವರು ಬರ ಪರಿಹಾರ ಕಾರ್ಯಗಳ ಪರಿಣಾಮಕಾರಿ ಅನುಷ್ಠಾನ ಮತ್ತು ಸೂಕ್ತ ಮೇಲ್ವಿಚಾರಣೆ ಬಗ್ಗೆ ಸರ್ಕಾರದ ಸುತ್ತೋಲೆ ಸಂಖ್ಯೆ: ಮುಕ:1:ಬಪ:2003, ದಿನಾಂಕ: 30-1-2003ರಲ್ಲಿ ತಿಳಿಸಿರುವ ಮಾರ್ಗಸೂಚಿಗಳನ್ನು ಉಲ್ಲಂಘಿಸಿ ಕರ್ತವ್ಯಚ್ಯುತಿ ಎಸಗಿ ಬೇಜವಾಬ್ದಾರಿತನದಿಂದ ವರ್ತಿಸಿರುವುದು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿಯವರನ್ನು ಅವರ ವಿರುದ್ಧ ಇಲಾಖಾ ವಿಚಾರಣೆ ಹೂಡುವುದನ್ನು ಕಾಯ್ದಿರಿಸಿ, ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಆರೋಪಿತ ಅಧಿಕಾರಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 98 ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಸಕ್ಷಮ ಅಧಿಕಾರಿಯ ಅನುಮತಿ ಪಡೆಯದೆ ಕೇಂದ್ರಸ್ಥಾನ ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1107

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ಬಿ.ಬಿ. ದೇವೂರ್, ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ ನಿಯೋಜನೆ ಮೇರೆಗೆ ರಾಣಿಬೆನ್ನೂರು ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿರುವವರ ವಿರುದ್ಧ ಇಲಾಖಾ ವಿಚಾರಣೆ ಬಗ್ಗೆ.

**ಓದಲಾಗಿದೆ:**

1. ವಿಭಾಗಾಧಿಕಾರಿ, ಬೆಳಗಾವಿ ವಿಭಾಗ ಇವರ ದಿನಾಂಕ:27-2-2001ರ ಪತ್ರ ಸಂಖ್ಯೆ:ಕಂಶಾ:ಸಿಬ್ಬಂದಿ:1:ಇತರೆ: ವಿವ:114:2000-01.
2. ದಿನಾಂಕ:22-5-2002ರ ತಿಳುವಳಿಕೆ ಪತ್ರ ಸಂಖ್ಯೆ:ಆರ್‌ಡಿ 11 ಎಡಿಇ 2001.
3. ಶ್ರೀ ಬಿ.ಬಿ. ದೇವೂರ್, ತಹಶೀಲ್ದಾರ್, ರಾಣಿಬೆನ್ನೂರು ತಾಲ್ಲೂಕು ಇವರ ದಿನಾಂಕ:27-8-02ರ ಮನವಿ.
4. ದಿನಾಂಕ:9-5-2003ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 11 ಎಡಿಇ 2001.

**ಪ್ರಸ್ತಾವನೆ:**

ಶ್ರೀ ಬಿ.ಬಿ. ದೇವೂರ್, ತಹಶೀಲ್ದಾರ್, ರಾಣಿಬೆನ್ನೂರು ತಾಲ್ಲೂಕು, ಇವರ ಕರ್ತವ್ಯಲೋಪದ ವಿರುದ್ಧ ವರದಿ ಮಾಡಿರುವ ಬೆಳಗಾವಿ ವಿಭಾಗಾಧಿಕಾರಿಯವರು ದಿನಾಂಕ:1-1-2001ರ ಅರ್ಹತಾ ದಿನಾಂಕದನ್ವಯ ಮತದಾರರ ಪಟ್ಟಿ ವಿಶೇಷ ಪರಿಷ್ಕರಣೆ ಕಾಲಕ್ಕೆ ಮುಖ್ಯ ಚುನಾವಣಾಧಿಕಾರಿಗಳು ಹಾಗೂ ಪ್ರಧಾನ ಕಾರ್ಯದರ್ಶಿಗಳು, ಸಿಆಸುಇ(ಚು) ಬೆಂಗಳೂರು ಇವರ ಸುತ್ತೋಲೆ ಸಂಖ್ಯೆ:ಸಿಇಎಸ್‌ಯುಇ 59:ಸಿಹೆಚ್‌ಯು ಎಪಿಎ:2000, ದಿನಾಂಕ:18-10-2000ರ ಸುತ್ತೋಲೆಯ ಕಂಡಿಕೆ(5)ರನ್ವಯ ಹಕ್ಕು ಆಕ್ಷೇಪಣೆಯ ಅರ್ಜಿಗಳನ್ನು (ಸ.ನಂ.6,7,8) ಸ್ವೀಕರಿಸಲು ರಾಣಿಬೆನ್ನೂರು ನಗರದಲ್ಲಿ ನಿರ್ಧಿಷ್ಟಾಧಿಕಾರಿಗಳನ್ನು ನೇಮಿಸಲಾಗಿದ್ದರೂ ಸದರಿ ಸುತ್ತೋಲೆಯ ಕಂಡಿಕೆ (16)ರನ್ವಯ ಸ.ನಂ.6ರ ಅರ್ಜಿ ಫಾರ್ಮ್‌ಗಳು ತಹಶೀಲ್ದಾರ್‌ರ ಕಛೇರಿಯಿಂದ ನಿರ್ದಿಷ್ಟಾಧಿಕಾರಿಗಳ ಮೂಲಕ ವಿತರಣೆ ಮಾಡದೇ ಅವುಗಳನ್ನು ವಿಜಯ ಪ್ರಿಂಟಿಂಗ್ ಪ್ರೆಸ್, ರಾಣಿಬೆನ್ನೂರು ಎಂಬ ಖಾಸಗಿ ಮುದ್ರಾಣಾಲಯದಲ್ಲಿ ಮುದ್ರಿಸಿರುವುದಾಗಿ, ಈ ಬಗ್ಗೆ ಶ್ರೀ ಮಂಜುನಾಥ್ ಎಚ್.ಓಲೇಕಾರ್, ಅಧ್ಯಕ್ಷರು ತಾಲ್ಲೂಕು ಸಂಯುಕ್ತ ಜನತಾದಳ ರಾಣಿಬೆನ್ನೂರು ಇವರು ದಿನಾಂಕ:27-12-2000ದ ತಮ್ಮ ದೂರಿನಲ್ಲಿ ಆರೋಪಿಸಿದ್ದು, ಶ್ರೀ ಬಿ.ಬಿ. ದೇವೂರ್ ಇವರು ಪಟ್ಟಭದ್ರ ಹಿತಾಸಕ್ತಿಗಳಿಗೆ ಚುನಾವಣಾ ಸಮಯದಲ್ಲಿ ಸಹಾಯ ಮಾಡುವ ದೃಷ್ಟಿಯಿಂದ ದಿನಾಂಕ:1-12-2000ದ ನಂತರ ಒಂದೇ ಬಂಡಲ್‌ನಲ್ಲಿ ಸುಮಾರು 3006 ಅರ್ಜಿಗಳನ್ನು ತಾಲ್ಲೂಕು ಕಛೇರಿಗೆ ತರಿಸಿಕೊಂಡು ಮುಖ್ಯ ಚುನಾವಣಾಧಿಕಾರಿಗಳ ಸುತ್ತೋಲೆಯಲ್ಲಿನ ನಿರ್ದೇಶನಗಳನ್ನು ಕಡೆಗಾಣಿಸಿ ಅದಕ್ಕೆ ವ್ಯತಿರಿಕ್ತವಾಗಿ ವರ್ತಿಸಿ 1960ರ ಮತದಾರರ ನೋಂದಣಿ ನಿಯಮಗಳ ನಿಯಮ 2(ಡಿ)ಯನ್ನು ಉಲ್ಲಂಘಿಸಿ ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಂಡಿರುತ್ತಾರೆಂದು ದೂರು ಅರ್ಜಿ ಸಲ್ಲಿಸಿರುವ ಬಗ್ಗೆ ಬೆಳಗಾವಿ ವಿಭಾಗಾಧಿಕಾರಿಯವರು ಶ್ರೀ ಬಿ.ಬಿ. ದೇವೂರ್‌ರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅಲ್ಲದೆ ನಮೂನೆ ಸಂಖ್ಯೆ:6ರ ಸುಮಾರು 3006 ಅರ್ಜಿಗಳನ್ನು ಒಂದೇ ಬಂಡಲ್‌ನಲ್ಲಿ ತಾಲ್ಲೂಕು ಕಛೇರಿಗೆ ತರಿಸಿಕೊಂಡು ಅವುಗಳನ್ನು ಸರಿಯಾಗಿ ಪರಿಶೀಲಿಸದೆ ಪಟ್ಟಭದ್ರ ಹಿತಾಸಕ್ತಿಗಳಿಗೆ ಅನುಕೂಲ ಮಾಡುವ ದೃಷ್ಟಿಯಿಂದ ಹಾಗೂ ಮೊದಲ ಬಾರಿಗೆ ಹೆಸರುಗಳನ್ನು ನೋಂದಾಯಿಸುವಂತೆ ತೋರಿಸಲು ಅಂತಹವರ ವಯಸ್ಸು ಮತ್ತು ಅವರ ವಾಸ ಸ್ಥಾನಗಳನ್ನು ಸಾಬೀತುಪಡಿಸುವ ಅನಧಿಕೃತ ದಾಖಲೆಗಳನ್ನು ನಂತರ ಅರ್ಜಿಗಳಿಗೆ ಸೇರಿಸಿ ತಾಲ್ಲೂಕು ತಹಶೀಲ್ದಾರ್‌ರು ಭೋಗಸ್ ಮತದಾರರನ್ನು ನಗರ ಪ್ರದೇಶದಲ್ಲಿ ಸೇರಿಸಿರುತ್ತಾರೆಂದು, ಇದರಿಂದಾಗಿ 1960ರ ಮತದಾರರ ನೋಂದಣಿ ನಿಯಮಗಳ ನಿಯಮ 12,13,14,15,16,17 ಮತ್ತು 20ನ್ನು ಉಲ್ಲಂಘಿಸಿ ಅದಕ್ಕೆ ವ್ಯತಿರಿಕ್ತವಾಗಿ ನಡೆದುಕೊಂಡು ರಾಜ್ಯದ ಮುಖ್ಯ ಚುನಾವಣಾಧಿಕಾರಿಗಳು ಹಾಗೂ ತಮ್ಮ ಮೇಲಾಧಿಕಾರಿಗಳ ನಿರ್ದೇಶನಗಳನ್ನು ಉಲ್ಲಂಘಿಸಿದ್ದು ಕರ್ತವ್ಯ ನಿರ್ಲಕ್ಷತೆಯನ್ನು ತೋರಿ ಬೇಜವಾಬ್ದಾರಿಯಿಂದ ಸರ್ಕಾರಿ ನೌಕರನ ಅಲ್ಲದ ರೀತಿಯಲ್ಲಿ ನಡೆದುಕೊಂಡು ದುರ್ನಡತೆಯನ್ನು ಎಸಗಿರುತ್ತಾರೆಂದು ಹಾಗೂ ಬಾಗಲಕೋಟೆ ನಗರದ ಮತಕಟ್ಟೆ ಸಂಖ್ಯೆ 137 ಹಾಗೂ 138ರಲ್ಲಿ ಮತದಾನವು ಸ್ಥಗಿತವಾಗಿ ಮರು ಮತದಾನ ನಡೆಸಬೇಕಾದ ಪ್ರಸಂಗಕ್ಕೆ ಕಾರಣರಾಗಿದ್ದಾರೆಂದು ವರದಿ ಮಾಡಿರುವ ಬೆಳಗಾವಿ ವಿಭಾಗಾಧಿಕಾರಿಯವರು ಶ್ರೀ ಬಿ.ಬಿ. ದೇವೂರ್ ರವರು 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳ ನಿಯಮ 3(1) (2) ಹಾಗೂ 5(1)ನ್ನು ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸುವಂತೆ ಮೇಲೆ ಕ್ರ.ಸಂ. (1)ರಲ್ಲಿ ಓದಲಾದ 27-2-01ರ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ.

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11ರ ಮೇರೆಗೆ ಮೇಲ್ಕಂಡ ಆರೋಪಗಳ ಬಗ್ಗೆ ಆರೋಪಿತರ ವಿರುದ್ಧ ಆರೋಪ ಪಟ್ಟಿಗಳನ್ನು (ಅನುಬಂಧ 1ರಿಂದ 4ರ ವರೆಗೆ) ಇವರಿಗೆ ಜಾರಿ ಮಾಡಿ ಸದರಿ ಆರೋಪಗಳ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಲು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ದಿನಾಂಕ:22-5-02ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲಾಗಿತ್ತು. ಸದರಿ ತಿಳುವಳಿಕೆ ಪತ್ರ ಹಾಗೂ ಆರೋಪಗಳಿಗೆ ಉತ್ತರಿಸಲು ಒಂದು ತಿಂಗಳ ಕಾಲಾವಕಾಶವನ್ನು ನೀಡಬೇಕೆಂದು ಆರೋಪಿತ ಅಧಿಕಾರಿಯು ತಮ್ಮ ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ದಿನಾಂಕ:27-8-02ರ ಮನವಿಯಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಅದರಂತೆ ಇವರು ಕೋರಿರುವ ಕಾಲಾವಕಾಶವು ಮುಗಿದು 5 ತಿಂಗಳ ನಂತರವು ಸಹ ತಮ್ಮ ಲಿಖಿತ ಹೇಳಿಕೆ ಸರ್ಕಾರಕ್ಕೆ ಸಲ್ಲಿಸಿರುವುದಿಲ್ಲ. ಆದುದರಿಂದ ದಿನಾಂಕ:22-5-02ರ ತಿಳುವಳಿಕೆ ಪತ್ರದಲ್ಲಿ ಸ್ಪಷ್ಟವಾಗಿ ತಿಳಿಸಿರುವಂತೆ ನಿಗದಿಪಡಿಸಿರುವ ಅವಧಿಯೊಳಗೆ ಆಪಾದಿತರ ಪ್ರತಿವಾದದ ಲಿಖಿತ ಹೇಳಿಕೆಯನ್ನು ಸಲ್ಲಿಸದಿದ್ದಲ್ಲಿ ಅವರ ವಿರುದ್ಧದ ಆರೋಪಗಳ ಬಗ್ಗೆ ಪ್ರತಿವಾದವೇನು ಇಲ್ಲವೆಂದು ಭಾವಿಸಲಾಗುತ್ತದೆ ಮತ್ತು ಅವರ ವಿರುದ್ಧ ಏಕಪಕ್ಷಿಯವಾಗಿ ಮುಂದಿನ ಶಿಸ್ತು ಕ್ರಮ ಜರುಗಿಸಲಾಗುತ್ತದೆಯೆಂದು ಸ್ಪಷ್ಟ ಪಡಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ದಿನಾಂಕ:9-5-2003ರ ಸರ್ಕಾರಿ ಆದೇಶದಲ್ಲಿ ಈ ಪ್ರಕರಣದಲ್ಲಿ ಆರೋಪಿತರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಬಿ.ಎಸ್. ಪಾಟೀಲ್, ನಿವೃತ್ತ ಜಿಲ್ಲಾ ಮತ್ತು ಸೇಷನ್ಸ್ ನ್ಯಾಯಾಧೀಶರು, "ಶುಭೋದಯ", ಮಿಚಿಗಾನ್ ಕಾಂಪೌಂಡ್, ಸಪ್ತಪುರ ಧಾರವಾಡ-8, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಆದರೆ ಸದರಿ ವಿಚಾರಣಾಧಿಕಾರಿಯವರಿಗೆ ದಿನಾಂಕ:9-5-03ರ ಸರ್ಕಾರಿ ಆದೇಶದ ಪ್ರತಿ ಹಾಗೂ ಅದರೊಂದಿಗೆ ವಿಚಾರಣೆಗೆ ಸಂಬಂಧಿಸಿದ ದಾಖಲಾತಿಗಳನ್ನು ನೋಂದಣಿ ಅಂಚೆ ಮೂಲಕ ಕಳುಹಿಸಲಾಗಿತ್ತು. ಅದನ್ನು ಅಂಚೆ ಇಲಾಖೆಯು "ಡಿಸೀಸ್ಡ್" ಎಂಬ ಷರಾದೊಂದಿಗೆ ಸರ್ಕಾರಕ್ಕೆ ಹಿಂತಿರುಗಿಸಿರುತ್ತದೆ. ಈ ಹಿನ್ನೆಲೆಯಲ್ಲಿ ಈ ಪ್ರಕರಣದಲ್ಲಿ ಬೇರೊಬ್ಬ ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಬೇಕೆಂಬ ನಿರ್ಧಾರವನ್ನು ಸರ್ಕಾರ ತಿಳಿದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಆರ್‌ಡಿ 11 ಎಡಿಇ 2001, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಂ.ಎನ್. ಗದಗ್, "ಮಹೇಶ್ ನಿಲಯ" ನಾಯಕರ್ ಚೌಲ್, ಡಿ.ಪಿ. ರಸ್ತೆ, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಶ್ರೀ ಬಿ.ಬಿ. ದೇವೂರ್, ತಹಶೀಲ್ದಾರ್ ರಾಣೆಬೆನ್ನೂರು ತಾಲ್ಲೂಕು (ನಿಯೋಜನೆ ಮೇರೆಗೆ ಇರುವ ಶಾಖಾಧಿಕಾರಿ, ಕರ್ನಾಟಕ ಸರ್ಕಾರದ ಸಚಿವಾಲಯ, ಬೆಂಗಳೂರು) ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ನೇಮಿಸಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಹಾವೇರಿ ಜಿಲ್ಲಾಧಿಕಾರಿಗಳ ಕಛೇರಿಯ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ಧಾರವಾಡ ಜಿಲ್ಲಾಧಿಕಾರಿಗಳ ಕಛೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸಿದ ಸ್ಥಳದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಛೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು ಹಾಗೂ ಸಂಬಂಧಿಸಿದ ಕಛೇರಿಯಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ:ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸತಕ್ಕದ್ದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5000-(ಐದು ಸಾವಿರ ರೂಪಾಯಿಗಳು ಮಾತ್ರ) ಸಂಚಿತ ಸಂಭಾವನೆಯನ್ನು ಹಾಗೂ ದಿನಾಂಕ:4-3-02ರ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ರನ್ವಯ 1000-(ಒಂದು ಸಾವಿರ ರೂಪಾಯಿಗಳು ಮಾತ್ರ) ರೂ.ಗಳ ವಾಹನ ಭತ್ಯೆ (ಕನ್ವೇಯನ್ಸ್ ಅಲೋಯೆನ್ಸ್)ನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಹಾವೇರಿ ಜಿಲ್ಲಾಧಿಕಾರಿಗಳು ಪಾವತಿ ಮಾಡತಕ್ಕದ್ದು.

ವಿಚಾರಣಾಧಿಕಾರಿಗಳು ಇಲಾಖಾ ವಿಚಾರಣೆಯನ್ನು ಮೇಲ್ಕಂಡ ನಿಯಮಗಳ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳನ್ನು ಅನುಸರಿಸಿ ಜರುಗಿಸಿ ವಿಚಾರಣಾ ವರದಿಯನ್ನು 3 ತಿಂಗಳೊಳಗಾಗಿ ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

ಈ ಹಿಂದೆ ಸದರಿ ಪ್ರಕರಣದಲ್ಲಿ ಶ್ರೀ ಬಿ.ಎಸ್., ಪಾಟೀಲ, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದ ದಿನಾಂಕ:9-5-03ರ ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 11 ಎಡಿಇ 2001ನ್ನು ಈ ಮೂಲಕ ರದ್ದುಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1108

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ವಿಷಯ:** ಶ್ರೀ ನಾಗರಾಜಪ್ಪ ಹೊನ್ನಾಳ, ಹಿಂದಿನ ತಹಶೀಲ್ದಾರ್, ಕಡೂರು ತಾಲ್ಲೂಕು ಮತ್ತು ಶ್ರೀ ಟಿ. ಮಹಮದ್, ಶಿರಸ್ತೇದಾರ್, ಇವರನ್ನು ಆರೋಪಗಳಿಂದ ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ:23-6-98ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 23 ಎಡಿಇ 97.

2. ಚಿಕ್ಕಮಗಳೂರು ಜಿಲ್ಲಾಧಿಕಾರಿಗಳ ದಿನಾಂಕ:23-10-99ರ ಪತ್ರ ಸಂಖ್ಯೆ:ಇಎಸ್‌ಟಿ(1) ಸಿಸಿಎ(ಮಿ)6:98-99

**ಪ್ರಸ್ತಾವನೆ:**

ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು ಕಛೇರಿಯಲ್ಲಿ ಮುಜರಾಯಿ ಆಡಿಟ್ ಸಮಯದಲ್ಲಿ ಈ ಕೆಳಕಂಡ ಲೋಪದೋಷಗಳು ಕಂಡು ಬಂದಿದ್ದವು:

1) 92-93ನೇ ಸಾಲಿನ ಮುಜರಾಯಿ ಶಾಖೆಯ ಹಣ ವಹಿವಾಟಿಗೆ ಸಂಬಂಧಿಸಿದ ವೋಚರ್‌ಗಳನ್ನು ಹಾಜರುಪಡಿಸಿರುವುದಿಲ್ಲದರ ಬಗ್ಗೆ.

2) ಹರಾಜು ನಡೆಸಿದ:ಹುಂಡಿ ಒಡೆದ ಹಣ ಕಡಿಮೆ ಜಮಾ ಮಾಡಿ ರೂ.12,89,205-00 ಗಳನ್ನು ದುರುಪಯೋಗ ಮಾಡಿರುವುದು.

3) ದೈನಂದಿನ ನಗದು ಪುಸ್ತಕ ಬರೆದಿಲ್ಲದಿರುವುದು, ಮುಂತಾದ ಕರ್ತವ್ಯ ಲೋಪಗಳು.

ಈ ಎಲ್ಲಾ ಅವ್ಯವಹಾರಗಳಿಗೆ ಶ್ರೀ ನಾಗರಾಜಪ್ಪ ಹೊನ್ನಾಳ್, ಹಿಂದಿನ ತಹಶೀಲ್ದಾರ್, ಕಡೂರು, ಶ್ರೀ ಟಿ. ಮಹಮದ್, ಶಿರಸ್ತೇದಾರ್, ಶ್ರೀ ಹೆಚ್.ಆರ್. ಸುಧೀರ್, ದ್ವಿ.ದ.ಸ., ಇವರುಗಳು ಕಾರಣರಾಗಿರುವುದರಿಂದ ಇವರುಗಳ ವಿರುದ್ಧ ಅವರವರ ಕರ್ತವ್ಯ ಲೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಚಿಕ್ಕಮಗಳೂರು ಜಿಲ್ಲಾಧಿಕಾರಿಗಳನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಿ, ಈ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರದ ಅನುಸಾರ ಇಲಾಖಾ ವಿಚಾರಣೆಯ ವರದಿಯನ್ನು ರವಾನಿಸುತ್ತಾ ಶ್ರೀ ನಾಗರಾಜಪ್ಪ ಹೊನ್ನಾಳ್, ಹಿಂದಿನ ತಹಶೀಲ್ದಾರ್, ಕಡೂರು

ತಾಲ್ಲೂಕು ಮತ್ತು ಶ್ರೀ ಟಿ. ಮಹಮದ್, ಶಿರಸ್ತೇದಾರ್ ಇವರ ವಿರುದ್ಧ ಮಾಡಿರುವ ಆರೋಪವು ಸಾಬೀತಾಗಿರುವುದಿಲ್ಲವೆಂದು ತಿಳಿಸಿ ಈ ಪ್ರಕರಣದಲ್ಲಿನ ಮೂರನೇ ಆರೋಪಿಯಾಗಿರುವ ಶ್ರೀ ಹೆಚ್.ಆರ್. ಸುಧೀರ್, ದ್ವಿತೀಯ ದರ್ಜೆ ಸಹಾಯಕ ಇವರ ವಿರುದ್ಧ ಹೂಡಲಾಗಿದ್ದ ಎಲ್ಲಾ 8 ಆರೋಪಗಳು ಸಾಬೀತಾಗಿರುವುದರಿಂದ, ಅವರಿಂದ ನಷ್ಟದ ಹಣವನ್ನು ವಸೂಲು ಮಾಡುವ ಬಗ್ಗೆ ಪ್ರತ್ಯೇಕವಾದ ಕ್ರಮವನ್ನು ಕೈಗೊಳ್ಳಲಾಗುತ್ತಿದೆ ಎಂದು ಚಿಕ್ಕಮಗಳೂರು ಜಿಲ್ಲಾಧಿಕಾರಿಯವರು ವರದಿ ಮಾಡಿರುತ್ತಾರೆ.

ಚಿಕ್ಕಮಗಳೂರು ಜಿಲ್ಲಾಧಿಕಾರಿಗಳು ಸರ್ಕಾರಕ್ಕೆ ಸಲ್ಲಿಸಿರುವ ಇಲಾಖಾ ವಿಚಾರಣಾ ವರದಿ ಹಾಗೂ ಇತರೆ ದಾಖಲೆಗಳನ್ನು ಪರಿಶೀಲಿಸಿ ಸರ್ಕಾರವು ಈ ವರದಿಯನ್ನು ಒಪ್ಪಿಕೊಂಡು ಶ್ರೀ ನಾಗರಾಜಪ್ಪ ಹೊನ್ನಾಳ್, ಹಿಂದಿನ ತಹಶೀಲ್ದಾರ್ ಕಡೂರು ತಾಲ್ಲೂಕು, ಹಾಲಿ ತಹಶೀಲ್ದಾರ್, ಬ್ಯಾಡಗಿ ತಾಲ್ಲೂಕು ಮತ್ತು ಶ್ರೀ ಮಹಮದ್, ಶಿರಸ್ತೇದಾರ್, ತಾಲ್ಲೂಕು ಕಛೇರಿ, ಕಡೂರು ತಾಲ್ಲೂಕು ಇವರ ವಿರುದ್ಧದ ಆರೋಪಗಳು ಸಾಬೀತಾಗದಿರುವುದು ಸ್ಪಷ್ಟವಾಗಿರುವುದರಿಂದ ಅವರಿಬ್ಬರನ್ನು ಆರೋಪ ಮುಕ್ತಗೊಳಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 23 ಎಡಿಇ 97, ಬೆಂಗಳೂರು, ದಿನಾಂಕ: 26ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು ಶ್ರೀ ನಾಗರಾಜಪ್ಪ ಹೊನ್ನಾಳ್, ಹಿಂದಿನ ತಹಶೀಲ್ದಾರ್, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ ಹಾಲಿ ತಹಶೀಲ್ದಾರ್, ಬ್ಯಾಡಗಿ ತಾಲ್ಲೂಕು, ಹಾವೇರಿ ಜಿಲ್ಲೆ ಮತ್ತು ಶ್ರೀ ಟಿ. ಮಹಮ್ಮದ್, ಶಿರಸ್ತೇದಾರ್ ತಾಲ್ಲೂಕು ಕಛೇರಿ, ಕಡೂರು ಹಾಲಿ ನಿವೃತ್ತರು ಇವರುಗಳನ್ನು ಅವರುಗಳ ವಿರುದ್ಧ ದಿನಾಂಕ:23-6-1998ರ ಸರ್ಕಾರಿ ಆದೇಶ ಸಂಖ್ಯೆ:ಕಂಇ 23 ಎಡಿಇ 97ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಈ ಮೇಲೆ ತಿಳಿಸಿರುವ ಶ್ರೀ ನಾಗರಾಜಪ್ಪ ಹೊನ್ನಾಳ ಮತ್ತು ಟಿ. ಮಹಮ್ಮದ್ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ಜರುಗಿಸದಿದ್ದಲ್ಲಿ ಅವರುಗಳು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅಂತಹ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1109

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)

**ಬಂಡವಾಳ ಹಿಂತೆಯುವಿಕೆ ಮತ್ತು ಸಾರ್ವಜನಿಕ ಉದ್ದಿಮೆಗಳ ಸುಧಾರಣಾ ಸಚಿವಾಲಯ**

**ವಿಷಯ:** ಮೈಸೂರು ಲ್ಯಾಂಪ್ಸ್ ವರ್ಕ್ಸ್ ಸಂಸ್ಥೆಯ ನೌಕರರಿಗೆ ಜನವರಿ 2003 ರಿಂದ 11-06-2003ರವರೆಗೆ ವೇತನ ಪಾವತಿಗಾಗಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಲ್ಯಾಂಪ್ಸ್ ವರ್ಕ್ಸ್ ಸಂಸ್ಥೆ ಇವರ ಪತ್ರ ಸಂಖ್ಯೆ MLW L&L C2 2003 ದಿನಾಂಕ 22-7-2003.

ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಲ್ಯಾಂಪ್ಸ್ ವರ್ಕ್ಸ್‌ರವರು ಮೇಲಿನ ತಮ್ಮ ಪತ್ರದಲ್ಲಿ ಕಂಪನಿಯಲ್ಲಿ ಬಾಕಿ ಉಳಿದ 540 ಉದ್ಯೋಗಿಗಳಲ್ಲಿ 135 ಉದ್ಯೋಗಿಗಳು ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದು ಉಳಿದ 405 ಉದ್ಯೋಗಿಗಳಿಗೆ ಜನವರಿ 2003ರಿಂದ 11-06-2003ರವರೆಗೆ ವೇತನ ಪಾವತಿಸಬೇಕೆಂದು ತಿಳಿಸಿರುತ್ತಾರೆ. ಮೈಸೂರು ಲ್ಯಾಂಪ್ಸ್ ವರ್ಕ್ಸ್ ಸಂಸ್ಥೆಯನ್ನು 12-06-2003ರಿಂದ ಸಂಪೂರ್ಣವಾಗಿ ಮುಚ್ಚಲಾಗಿರುವುದರಿಂದ ಮತ್ತು ಹಣಕಾಸು ಲಭ್ಯತೆ ಇಲ್ಲದಿರುವುದರಿಂದ ಬಿಡುಗಡೆಗೊಂಡ ಈ 405 ಉದ್ಯೋಗಿಗಳಿಗೆ ವೇತನ ಪಾವತಿಸಿರುವುದಿಲ್ಲವೆಂದು ಸರ್ಕಾರಕ್ಕೆ ತಿಳಿಸಿ ಒಟ್ಟು 1.25 ಕೋಟಿ ರೂ.ಗಳನ್ನು ಬಿಡುಗಡೆ ಮಾಡಲು ಕೋರಿರುತ್ತಾರೆ. ಕಾರ್ಮಿಕ ಇಲಾಖೆಯು ಮೈಸೂರು ಲ್ಯಾಂಪ್ಸ್ ವರ್ಕ್ಸ್ ಸಂಸ್ಥೆಯನ್ನು ಮುಚ್ಚಲು ಪರವಾನಗಿ ಕೊಡುವ ಸಮಯದಲ್ಲಿ ಕೈಗಾರಿಕಾ ವ್ಯಾಜ್ಯ ಕಾಯ್ದೆಯಡಿ ಉದ್ಯೋಗಿಗಳಿಗೆ ಸ್ವಯಂ ನಿವೃತ್ತಿ ಯೋಜನೆಯ ಪರಿಹಾರವನ್ನು ಪಾವತಿಸುವಾಗ ಅಥವಾ ಮುಚ್ಚುವಿಕೆ ಪರಿಹಾರ ಪಾವತಿಸುವಾಗ ಘಟಕವನ್ನು ಮುಚ್ಚುವ ಸಮಯದವರೆಗೆ ವೇತನ ಪಾವತಿಸುವುದು ಅತ್ಯಾವಶ್ಯಕವಾಗಿರುವುದೆಂದು ಸಹ ಹೇಳಿರುತ್ತಾರೆ.

ಈ ಹಿಂದೆ ದಿನಾಂಕ 13-05-2003ರ ತಮ್ಮ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಲ್ಯಾಂಪ್ಸ್ ವರ್ಕ್ಸ್ ರವರು ಸ್ವಯಂ ನಿವೃತ್ತಿ ಯೋಜನೆಗೆ ಹಣ ಬಿಡುಗಡೆ ಮಾಡುವ ಬಗ್ಗೆ, ಭವಿಷ್ಯನಿಧಿ ಆಯುಕ್ತರ ಕ್ರಮದಂತೆ ಖಜಾನೆಯಲ್ಲಿ ನಿಷೇಧವಿರುವುದರಿಂದ ಕರ್ನಾಟಕ ಟಂಗ್‌ಸ್ಟನ್ ಮೋಲಿ ಖಾತೆಗೆ ಹಣ ಬಿಡುಗಡೆ ಮಾಡಬೇಕೆಂದು ಕೋರಿದ್ದರು.

ನಂತರ ದಿನಾಂಕ 17-06-2003ರ ಪತ್ರದಲ್ಲಿ ಖಜಾನೆಯ ಮೇಲೆ ಭವಿಷ್ಯನಿಧಿ ಆಯುಕ್ತರು ವಿಧಿಸಿದ್ದ ನಿಷೇಧವನ್ನು ಸ್ವಯಂ ನಿವೃತ್ತಿ ಯೋಜನೆಗಾಗಿ ಸರ್ಕಾರದಿಂದ ಬಿಡುಗಡೆಯಾಗುವ ಹಣಕ್ಕೆ ಮಾತ್ರ ಹೊರತು ಪಡಿಸಿ ಎಂಬ ಮಾರ್ಪಾಟು ಆದೇಶವನ್ನು ಉಲ್ಲೇಖ KN/PF/Recovery cell/2003/340 ದಿನಾಂಕ 17-06-2003ರಂದು ಹೊರಡಿಸಿದ್ದಾರೆಂದು ತಿಳಿಸಿರುತ್ತಾರೆ. ಆದುದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ. ಡಿಡಿಪಿಇಆರ್ 24 ಎಆರ್‌ಯು 2003, ಬೆಂಗಳೂರು, ದಿನಾಂಕ: 13ನೇ ಆಗಸ್ಟ್ 2003**

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಮೈಸೂರು ಲ್ಯಾಂಪ್ ವರ್ಕ್ಸ್ ಸಂಸ್ಥೆಯು 405 ಉದ್ಯೋಗಿಗಳಿಗೆ ಜನವರಿ 2003 ರಿಂದ 11-06-2003ರವರೆಗೆ ವೇತನ ಬಾಕಿಯನ್ನು ಸ್ವಯಂ ನಿವೃತ್ತಿ ಯೋಜನೆಯ ಪರಿಹಾರದೊಂದಿಗೆ ಪಾವತಿಸಲು ರೂ. 1.25 ಕೋಟಿ (ರೂಪಾಯಿ ಒಂದು ಕೋಟಿ ಇಪ್ಪತ್ತೈದು ಲಕ್ಷಗಳು ಮಾತ್ರ) ಸಾಲವಾಗಿ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಬಿಡುಗಡೆ ಮಾಡಿ ಆದೇಶಿಸಿದೆ.

1) ಬಿಡುಗಡೆ ಮಾಡಲಾದ ಹಣವನ್ನು ಬೇರೆ ಕಾರಣಗಳಿಗಾಗಿ ಉಪಯೋಗಿಸದೇ 405 ಉದ್ಯೋಗಿಗಳಿಗೆ ಜನವರಿ 2003 ರಿಂದ 11-06-2003ರ ಬಾಕಿ ವೇತನ ಪಾವತಿಗಾಗಿಯೇ ಉಪಯೋಗಿಸತಕ್ಕದ್ದು.

2) ಪ್ರತಿ ಉದ್ಯೋಗಿಗೆ ಚೆಕ್‌ಗಳನ್ನು ವಿತರಿಸುವ ಮುನ್ನ ರಾಜ್ಯ ಲೆಕ್ಕ ಪತ್ರ ಇಲಾಖೆಯ ವತಿಯಿಂದ Pre-Audit ಮಾಡಿಸತಕ್ಕದ್ದು. ನಂತರ ಸಂಬಂಧಿಸಿದ ದಾಖಲಾತಿಯೊಂದಿಗೆ ಬಂಡವಾಳ ಹಿಂತೆಗೆಯುವಿಕೆ ಮತ್ತು ಸಾರ್ವಜನಿಕ ಸುಧಾರಣೆ ಇಲಾಖೆಯಿಂದ ಸ್ಥಿರೀಕರಣ ಮಾಡಿಸಿಕೊಳ್ಳತಕ್ಕದ್ದು.

3) ಮೇಲೆ ವಿಧಿಸಿರುವ ಷರತ್ತುಗಳನ್ನು ಪಾಲಿಸಿದ ನಂತರವೇ ಉದ್ಯೋಗಿಗಳಿಗೆ ಹಣ ಬಿಡುಗಡೆ ಮಾಡತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 6852-02-190-4-02 ರಾಜ್ಯ ನವೀಕರಣ ನಿಧಿ (ಸ್ವಯಂ ನಿವೃತ್ತಿ ಯೋಜನೆ ಮತ್ತಿತರ ಪರಿಹಾರಗಳು) ಅಡಿಯಲ್ಲಿ ಭರಿಸತಕ್ಕದ್ದು.

ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಲ್ಯಾಂಪ್ ವರ್ಕ್ಸ್ ಸಂಸ್ಥೆ, ಇವರು ಸ್ವೀಕೃತ ರಸೀದಿ (Payees receipt) ಗೆ ಆಯುಕ್ತರು ಕೈಗಾರಿಕಾಭಿವೃದ್ಧಿ ಮತ್ತು ನಿರ್ದೇಶಕರು, ಕೈಗಾರಿಕಾ ಮತ್ತು ವಾಣಿಜ್ಯ ಇಲಾಖೆ ರವರ ಮೇಲು ಸಹಿ ಪಡೆದು ಹಣವನ್ನು ಖಜಾನೆಯಿಂದ ಪಡೆಯುವ ಅಧಿಕಾರ ಹೊಂದಿರುತ್ತಾರೆ.

ಸಂಸ್ಥೆಯ ಆಸ್ತಿ ಮಾರಾಟದಿಂದ ಬಂದ ಹಣದಲ್ಲಿ ಸರ್ಕಾರಕ್ಕೆ ಈ ಸಾಲವನ್ನು ವಾಪಸ್ಸು ಮಾಡಬೇಕೆಂಬ ನಿಬಂಧನೆಗೆ ಒಳಪಟ್ಟಿರುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ FD 1280/Exp 1/2003 ದಿನಾಂಕ 13-08-2003ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ.ಎಸ್. ವಿಶ್ವನಾಥ್**
ಜಂಟಿ ನಿರ್ದೇಶಕರು (ಡಬ್ಲ್ಯೂಪಿ) ಹಾಗೂ
ಪದನಿಮಿತ್ತ ಸರ್ಕಾರದ ಉಪಕಾರ್ಯದರ್ಶಿ, ಡಿಡಿಪಿಆಆರ್.

ಪಿ.ಆರ್. 1110

## ಕೃಷಿ ಮತ್ತು ತೋಟಗಾರಿಕೆ ಸಚಿವಾಲಯ

**ವಿಷಯ:** ಶ್ರೀ ಜೆ.ಎನ್. ವಿಠಲಶೆಟ್ಟಿ, ನಿವೃತ್ತ ಸ.ತೋ.ನಿ. ಇವರ ವಿರುದ್ಧ ಶಿಸ್ತುಕ್ರಮಗಳ ಬಗ್ಗೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳ ನೇಮಕಾತಿ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ:ಕೃತೋಇ 101 ತೋಸೇಪ 2001 ದಿನಾಂಕ 22.8.2002.
2. ಶ್ರೀ ಗಣೇಶ್‌ರಾವ್ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಪತ್ರದ ದಿನಾಂಕ 23.1.2003.

**ಪ್ರಸ್ತಾವನೆ:**

ಶ್ರೀ ಜೆ.ಎನ್. ವಿಠಲಶೆಟ್ಟಿ, ನಿವೃತ್ತ ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರು (ರಾಜ್ಯವಲಯ) ತೋರಣಗಲ್ಲು ತೋಟಗಾರಿಕೆ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಸಸ್ಯಾಭಿವೃದ್ಧಿ ಗಿಡಗಳ ಉತ್ಪಾದನೆ ಹಾಗೂ ಮಾರಾಟಕ್ಕೆ ಸಂಬಂಧಿಸಿದಂತೆ ಸರ್ಕಾರಕ್ಕೆ ನಷ್ಟ ಉಂಟುಮಾಡಿದ್ದಾರೆ ಎಂಬ ಆರೋಪಗಳ ಬಗ್ಗೆ ಶಿಸ್ತು ಕ್ರಮ ಜರುಗಿಸಲು ಮೇಲೆ ಓದಲಾದ (1)ರ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಗಣೇಶ್‌ರಾವ್, ನಿವೃತ್ತ ಜಿಲ್ಲಾ ನ್ಯಾಯಾಧೀಶರುರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ಆದರೆ ಸದರಿ ನಿವೃತ್ತ ನ್ಯಾಯಾಧೀಶರು ಓದಲಾದ (2)ರ ಪತ್ರದಲ್ಲಿ ಇತ್ತೀಚೆಗೆ ಹೃದಯ ಶಸ್ತ್ರಚಿಕಿತ್ಸೆಯಾಗಿದೆಯೆಂದು ಇದರಿಂದ ಇಲಾಖಾ ವಿಚಾರಣೆ ನಡೆಸಲು ಸಾಧ್ಯವಿಲ್ಲವಿರುವುದಿಲ್ಲವೆಂದು ತಿಳಿಸಿರುವ ಹಿನ್ನೆಲೆಯಲ್ಲಿ ಸದರಿ ಪ್ರಕರಣದಲ್ಲಿ ಬೇರೊಬ್ಬ ವಿಚಾರಣಾಧಿಕಾರಿಯವರನ್ನು ನೇಮಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 101 ತೋಸೇಪ 2001, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

ಇದೇ ಸಮ ಸಂಖ್ಯೆಯ ದಿನಾಂಕ 22.8.2002ರ ಆದೇಶವನ್ನು ಮಾರ್ಪಡಿಸಿ, ಶ್ರೀ ಜೆ.ಎನ್. ವಿಠಲಶೆಟ್ಟಿ, ನಿವೃತ್ತ ಸಹಾಯಕ ತೋಟಗಾರಿಕೆ ನಿರ್ದೇಶಕರು ಇವರ ವಿರುದ್ಧ ಮಾಡಲಾದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆಯನ್ನು ನಡೆಸಲು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರ ರೀತ್ಯಾ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ನಂದಕುಮಾರ್ ಇವರನ್ನು ವಿಚಾರಣಾಧಿಕಾರಿಗಳನ್ನಾಗಿಯೂ ಹಾಗೂ ತೋಟಗಾರಿಕೆ ಉಪ ನಿರ್ದೇಶಕರು (ಜಿಪ) ಬಳ್ಳಾರಿ ಇವರ ಕಚೇರಿಯ ಅಧೀಕ್ಷಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿದೆ.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು ತೋಟಗಾರಿಕೆ ನಿರ್ದೇಶಕರ ಕಚೇರಿಯ ಆವರಣದಲ್ಲಿ ಅಥವಾ ಅವರು ಗುರುತಿಸಿ ನಿಗದಿಪಡಿಸುವ ಸ್ಥಳದಲ್ಲಿ ವಿಚಾರಣೆಯನ್ನು ನಡೆಸತಕ್ಕದ್ದು. ಈ ಉದ್ದೇಶಕ್ಕಾಗಿ ಲಭ್ಯವಿರುವ ಕಚೇರಿಗಳಲ್ಲಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶವನ್ನು ಮಾಡುವುದು. ಹಾಗೆಯೇ ಸಂಬಂಧಿಸಿದ ಕಚೇರಿಗಳಲ್ಲಿ ಲಭ್ಯವಿರುವ ಶೀಘ್ರಲಿಪಿಗಾರರ/ಬೆರಳಚ್ಚುಗಾರರ ಸಹಾಯವನ್ನು ಹಾಗೂ ಲೇಖನ ಸಾಮಗ್ರಿಗಳನ್ನು ಒದಗಿಸುವುದು.

ಈ ಪ್ರಕರಣದ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ರೂ.5,000/ (ರೂ.ಐದು ಸಾವಿರ ಮಾತ್ರ) ಸಂಚಿತ ಸಂಭಾವನೆಯನ್ನು ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿದ ನಂತರ ತೋಟಗಾರಿಕೆ ನಿರ್ದೇಶಕರು ಪಾವತಿ ಮಾಡುವುದು.

ವಿಚಾರಣಾಧಿಕಾರಿಗಳು ವಿಚಾರಣೆಯನ್ನು 3 ತಿಂಗಳೊಳಗಾಗಿ ವಿಚಾರಣೆಯನ್ನು ಪೂರೈಸಿ ವಿಚಾರಣಾ ವರದಿಯನ್ನು ಸಲ್ಲಿಸುವಂತೆ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಮಂಜುಳಗೀತ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಮತ್ತು ತೋಟಗಾರಿಕೆ ಇಲಾಖೆ.

ಪಿ.ಆರ್. 1111

## ಕಂದಾಯ ಸಚಿವಾಲಯ

**ವಿಷಯ:** ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಪೈಕಿ ಶೇ.80 ರಷ್ಟು ಹುದ್ದೆಗಳನ್ನು ಕಡಿತಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಅ.ಸ.ಪತ್ರ ಸಂ.ಡಿಪಿಎಆರ್ 6 ಈಕಾಅ.2000 ದಿ:4-7-2000. ಅಪರ ಮುಖ್ಯ ಕಾರ್ಯದರ್ಶಿಯವರಿಂದ.
2. ಟಿಪ್ಪಣಿ ಸಂ.ಸಿಎಸ್.3637:2000, ದಿ:30-8-2000 ಮುಖ್ಯ ಕಾರ್ಯದರ್ಶಿಯವರಿಂದ.
3. ಅ.ಟಿ. ಸಂ.ಸಿಆಸುಇ 6 ಈಕಾಅ 2000, ದಿ:30-8-2000, 2-2-2001 ಮತ್ತು 19-12-2001.
4. ಪತ್ರ ಸಂ.ಸಿಬ್ಬಂದಿ(ಜಿ):ವಿವಿಧ.51:2000-2001, ದಿ:11-7-2000, 9-2-2001, 11-2-2002, 20-8-2002, 27-8-2002, 4-9-2002 ಮತ್ತು 21-9-2002.
5. ಅನಧಿಕೃತ ಟಿಪ್ಪಣಿ ಸಂ. ಆರ್‌ಡಿ 316 ಬಿಎಂಎಂ 2000 ದಿ:14-2-2001.

**ಪ್ರಸ್ತಾವನೆ:**

ಮೇಲೆ ಓದಲಾದ (1)(2)(3) ರಲ್ಲಿನ ಅ.ಸ.ಪತ್ರ ಟಿಪ್ಪಣಿ ಮತ್ತು ಅನಧಿಕೃತ ಟಿಪ್ಪಣಿಗಳಲ್ಲಿ ಸರ್ಕಾರದ ವಿವಿಧ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳ ಸ್ಥಿತಿಯನ್ನು ವಿಮರ್ಶಿಸಿ ಅವುಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ರದ್ದುಗೊಳಿಸುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರು 2000-2001ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪ್ರಸ್ತಾಪಿಸಿದ್ದು, ಈ ವಿಷಯವನ್ನು ಪರಿಶೀಲಿಸಲು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಅಧಿಕಾರಿಯವರ ಸಮಿತಿಯನ್ನು ರಚಿಸಲಾಗಿದೆಯೆಂದು ಅದಕ್ಕಾಗಿ ಸೂಕ್ತ ಮಾಹಿತಿಯನ್ನು ಒದಗಿಸಬೇಕೆಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಕೋರಿದೆ. ಅದರಂತೆ, ಭೂಮಾಪನ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ಕಡಿತಗೊಳಿಸುವ ಬಗ್ಗೆ ಸೂಕ್ತ ಪ್ರಸ್ತಾವನೆ ಸಲ್ಲಿಸುವಂತೆ ನಿರ್ದೇಶಕರನ್ನು ಕೋರಲಾಗಿತ್ತು.

ಓದಲಾದ (4)ರ ಪತ್ರಗಳನ್ವಯ ಭೂಮಾಪನ ಇಲಾಖೆಯ ನಿರ್ದೇಶಕರು ಕಡಿತಗೊಳಿಸಬೇಕಾಗಿರುವ ವಿವಿಧ ವೃಂದದ ಹುದ್ದೆಗಳನ್ನು ಗುರುತಿಸಿ ನಿಗದಿತ ನಮೂನೆಯಲ್ಲಿ ಮಾಹಿತಿಯನ್ನು ಒದಗಿಸಿದ್ದಾರೆ. ಇಲಾಖೆಯಲ್ಲಿ ದಿನಾಂಕ 1-4-2000 ರಲ್ಲಿದ್ದಂತೆ ಖಾಲಿ ಇರುವ ಹುದ್ದೆಗಳ ಒಟ್ಟು ಸಂಖ್ಯೆ 1630 ಇದ್ದು ಇವುಗಳಲ್ಲಿ ಗ್ರೂಪ್ 'ಎ'-8, ಗ್ರೂಪ್ 'ಬಿ'-34, ಗ್ರೂಪ್ 'ಸಿ'-860 ಮತ್ತು ಗ್ರೂಪ್ 'ಡಿ'-728 ಖಾಲಿ ಇದ್ದು ಈ ಹುದ್ದೆಗಳಲ್ಲಿ ಶೇ.80 ರಷ್ಟು ಹುದ್ದೆಗಳನ್ನು ಕಡಿತಗೊಳಿಸುವ ಬಗ್ಗೆ ಸರ್ಕಾರದ ವಿವಿಧ ಹಂತಗಳಲ್ಲಿ ಜರುಗಿದ ಸಭೆಗಳಲ್ಲಿ ಚರ್ಚಿಸಲಾಗಿದೆ. ಗ್ರೂಪ್ 'ಎ' ಮತ್ತು 'ಬಿ' ಹುದ್ದೆಗಳನ್ನು ಮುಂಬಡ್ತಿ ಮೂಲಕ ತುಂಬಬೇಕಾಗಿರುವುದರಿಂದ ಇವುಗಳನ್ನು ರದ್ದುಪಡಿಸಬಾರದೆಂದು ತೀರ್ಮಾನಿಸಲಾಗಿದೆ. ಗ್ರೂಪ್-'ಸಿ' ವೃಂದದಲ್ಲಿ ಖಾಲಿ ಇರುವ ಒಟ್ಟು 860 ಹುದ್ದೆಗಳಲ್ಲಿ ಲಿಪಿಕ ವರ್ಗದಲ್ಲಿ ಶೇ. 80 ರಷ್ಟು ಹುದ್ದೆಗಳನ್ನು ಕಡಿತಗೊಳಿಸಲು ಹಾಗೂ ಸರ್ವೆಯರ್ಸ್ ಮತ್ತು ಇತರೇ ಕಾರ್ಯನಿರ್ವಾಹಕ ಹುದ್ದೆಗಳಲ್ಲಿ ಶೇ.50 ರಷ್ಟನ್ನು ಮಾತ್ರ ಕಡಿತಗೊಳಿಸಲು ತೀರ್ಮಾನಿಸಲಾಗಿದೆ. ಅದರಂತೆ, ಗ್ರೂಪ್- 'ಡಿ' ವೃಂದದ ಒಟ್ಟಾರೆ ಖಾಲಿ ಇರುವ 728 ಹುದ್ದೆಗಳಲ್ಲಿ ಈಗಾಗಲೇ ಶೇ. 5 ರಷ್ಟು ಹುದ್ದೆಗಳನ್ನು ಕಡಿತಗೊಳಿಸಬೇಕೆಂಬ ಸರ್ಕಾರದ ನೀತಿಯಂತೆ 474 ಹುದ್ದೆಗಳನ್ನು ದಿನಾಂಕ 21-10-2000 ದ ಆದೇಶದನ್ವಯ ರದ್ದುಪಡಿಸಲಾಗಿದೆ. ಉಳಿದ 254 ಹುದ್ದೆಗಳಲ್ಲಿ 193 ಹುದ್ದೆಗಳನ್ನು ರದ್ದುಪಡಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಇಲಾಖೆಯಲ್ಲಿ ಖಾಲಿ ಇರುವ ಗ್ರೂಪ್ 'ಬಿ' ವೃಂದದ ಭೂದಾಖಲೆಗಳ ಸಹಾಯಕ ನಿರ್ದೇಶಕರು ಹುದ್ದೆಗಳು ಇಲಾಖೆಯ ಉಪ ವಿಭಾಗ ಮಟ್ಟದ ಕಛೇರಿಗೆ ಮಂಜೂರಾಗಿದ್ದು, ಅವುಗಳು ಇಲಾಖೆಯ ಹಾಗೂ ಸಾರ್ವಜನಿಕ ಹಿತದೃಷ್ಟಿಯಿಂದ ಅತ್ಯವಶ್ಯಕವಾಗಿರುವುದರಿಂದ ಅವುಗಳನ್ನು ಶೇ.80 ರಷ್ಟು ಹುದ್ದೆಗಳ ಕಡಿತಕ್ಕೆ ಒಳಪಡಿಸದೇ ಮುಂದುವರಿಸುವಂತೆ, ನಿರ್ದೇಶಕರು ಕೋರಿದ್ದು ಈ ಅಂಶವನ್ನು ಪರಿಶೀಲಿಸಲಾಗಿದೆ. ಅದರಂತೆ, ಖಾಲಿ ಇರುವ 26 ವಾಹನ ಚಾಲಕರ ಹುದ್ದೆಗಳನ್ನು ಹಾಗೂ ಖಾಲಿ ಇರುವ 27 ಎರಡನೇ ದರ್ಜೆ ನಕಾಶೆಗಾರರ ಹುದ್ದೆಗಳನ್ನು ಶೇ.80 ರಷ್ಟು ಹುದ್ದೆಗಳ ಕಡಿತಕ್ಕೆ ಒಳಪಡಿಸದೇ ಮುಂದುವರಿಸಬೇಕೆಂದು ಕೋರಿರುವ ಅಂಶವನ್ನು ಪರಿಶೀಲಿಸಲಾಗಿದೆ.

ಭೂಮಾಪನ ಇಲಾಖೆಯ ನಿರ್ದೇಶಕರು ಪ್ರಸ್ತಾಪಿಸಿದಂತೆ ದಿನಾಂಕ 1-4-2000 ದಲ್ಲಿದ್ದಂತೆ ವಿವಿಧ ವೃಂದದ ಒಟ್ಟು 658 ಹುದ್ದೆಗಳಲ್ಲಿ ಮೇಲೆ ಹೇಳಲಾದ ಭೂದಾಖಲೆಗಳ ಸಹಾಯಕ ನಿರ್ದೇಶಕರು (ಕಾ.ನಿ.) 25 ಹುದ್ದೆಗಳು, ಎರಡನೇ ದರ್ಜೆ ನಕಾಶೆಗಾರರು 22 ಹಾಗೂ ವಾಹನ ಚಾಲಕರು 20 ಒಟ್ಟು 67 ಹುದ್ದೆಗಳನ್ನು ಶೇ. 80 ರಷ್ಟು ಕಡಿತಕ್ಕೆ ಒಳಪಡಿಸದೇ ಉಳಿದ ಒಟ್ಟು 591 ಹುದ್ದೆಗಳನ್ನು ಕಡಿತಗೊಳಿಸಬೇಕೆಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

### ಸರ್ಕಾರದ ಆದೇಶ ಸಂ.ಕಂಇ 123 ಭೂದಾಸ 2000, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003

ಪ್ರಸ್ತಾವನೆಯಲ್ಲಿ ಹೇಳಲಾದ ಕಾರಣಗಳ ಹಿನ್ನೆಲೆಯಲ್ಲಿ ಭೂಮಾಪನ ಕಂದಾಯ ವ್ಯವಸ್ಥೆ ಮತ್ತು ಭೂದಾಖಲೆಗಳ ಇಲಾಖೆಯಲ್ಲಿ ಖಾಲಿ ಇರುವ ಹುದ್ದೆಗಳಲ್ಲಿ ಶೇ.80 ರಷ್ಟು ಕಡಿತಗೊಳಿಸಲು ಗುರುತಿಸಲಾಗಿರುವ ಈ ಕೆಳಕಾಣಿಸಿದ ಒಟ್ಟು 591 ಹುದ್ದೆಗಳನ್ನು ರದ್ದುಪಡಿಸಲಾಗಿದೆ.

I (1) **ಗ್ರೂಪ್ 'ಸಿ' ಹುದ್ದೆಗಳು (ಕಾರ್ಯನಿರ್ವಾಹಕ)**

| | | | |
|---|---|---|---|
| 1) | ಅಧೀಕ್ಷಕರು (ಕಾ.ನಿ.) | - | 15 |
| 2) | ತಪಾಸಕರು (ಸೂಪರ್‌ವೈಸರ್) | - | 22 |
| 3) | ಪ್ರಥಮ ದರ್ಜೆ ಭೂಮಾಪಕರು | - | 6 |
| 4) | ದ್ವಿತೀಯ ದರ್ಜೆ ಭೂಮಾಪಕರು | - | 316 |
| | ಒಟ್ಟು | - | 359 |

ಈ ಹುದ್ದೆಗಳನ್ನು ಶೇ.50 ರಷ್ಟು ಕಡಿತಕ್ಕೆ ಒಳಪಡಿಸಿ ರದ್ದುಪಡಿಸಲಾಗಿದೆ.

| | | | |
|---|---|---|---|
| (2) | **ಗ್ರೂಪ್ 'ಸಿ' (ಲಿಪಿಕ ವರ್ಗದ) ಹುದ್ದೆಗಳು** | | |
| 1) | ಅಧೀಕ್ಷಕರು (ಆಡಳಿತ) | - | 9 |
| 2) | ಪ್ರಥಮ ದರ್ಜೆ ಸಹಾಯಕರು | - | 14 |
| 3) | ಶೀಘ್ರಲಿಪಿಗಾರರು | - | 2 |
| 4) | ಬೆರಳಚ್ಚುಗಾರರು | - | 14 |
| | ಒಟ್ಟು | - | 39 |
| II | **ಗ್ರೂಪ್ 'ಡಿ' ಹುದ್ದೆಗಳು** | | |
| 1) | ದಫ್ತರ್‌ಬಂದ್ | - | 38 |
| 2) | ಪ್ರೊಸೆಸ್ ಸರ್ವರ್ | - | 7 |
| 3) | ಬಾಂದು ಜವಾನ | - | 96 |
| 4) | ಸ್ವೀಪರ್ಸ್:ಸ್ಕ್ಯಾವೆಂಜರ್ಸ್:ವಾಚ್‌ಮನ್: ಲಷ್ಕರ್ಸ್ ಮತ್ತು ಗಾರ್ಡನರ್. | - | 13 |
| 5) | ವೀಲರ್ಸ್ ಮತ್ತು ಸ್ಟೋನ್ ಪಾಲಿಷರ್ಸ್ | - | 6 |
| 6) | ದಫೇದಾರ್ | - | 6 |
| 7) | ಕಛೇರಿ ಜವಾನರು | - | 27 |
| | ಒಟ್ಟು | - | 193 |

ಖಾಲಿ ಇರುವ ಹುದ್ದೆಗಳಲ್ಲಿ ಶೇ.80 ರಷ್ಟು ರದ್ದುಪಡಿಸಲಾದ ಒಟ್ಟು ಹುದ್ದೆಗಳು-591

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1112

**ಕೆ.ಎಸ್. ಶೇಂದ್ರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಮಾಪನ)

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಶ್ರೀ ಹೆಚ್.ಎಸ್. ನಾಗರಾಜ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಎಸ್.ಬಿ. ರಾಮಾಂಜನೇಯರೆಡ್ಡಿ ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಪಾವಗಡ ತುಮಕೂರು ಜಿಲ್ಲೆ ಇವರುಗಳ ವಿರುದ್ಧ ಇಲಾಖಾ ವಿಚಾರಣೆ ನಂತರ ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಇವರ ಪತ್ರ ಸಂಖ್ಯೆ:ಡಿಓ: ಜಡ್‌ಪಿಟಿ:ಇಎನ್‌ಜಿ:ಸಿಆರ್76:99-2000 ದಿ.22-1-2000.
2. ಸರ್ಕಾರದ ಆದೇಶ ಸಂ:ಗ್ರಾಅಪ12ಇಎನ್‌ಕ್ಯೂ2000 ಬೆಂಗಳೂರು ದಿ.27-1-2000 ಮತ್ತು 18-12-2000.
3. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಇವರ ಪತ್ರ ಸಂಖ್ಯೆ:ಡಿಓ: ಜಡ್‌ಪಿಟಿ:ಇಎನ್‌ಜಿ:ಸಿಆರ್76:99-2000 ದಿ.18-1-2000.
4. ಸರ್ಕಾರದ ನೋಟೀಸ್ ಸಂ:ಗ್ರಾಅಪ 12 ಇಎನ್‌ಕ್ಯೂ 2000 ಬೆಂಗಳೂರು ದಿ.14-8-2000.
5. ಶ್ರೀ ಹೆಚ್.ಎಸ್. ನಾಗರಾಜ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಮತ್ತು ಶ್ರೀ ಎಸ್.ಬಿ. ರಾಮಾಂಜನೇಯರೆಡ್ಡಿ ಅಂದಿನ ಕಿರಿಯ ಇಂಜಿನಿಯರ್, ಇವರುಗಳ ರಕ್ಷಣಾ ಹೇಳಿಕೆ ದಿ.2-9-2000.
6. ವಿಚಾರಣಾಧಿಕಾರಿಗಳನ್ನು ನೇಮಿಸಿದ ಸರ್ಕಾರದ ಆದೇಶ ಸಂ:ಗ್ರಾಅಪ 12 ಇಎನ್‌ಕ್ಯೂ 2000 ಬೆಂಗಳೂರು ದಿ.10-10-2000.
7. ವಿಚಾರಣಾಧಿಕಾರಿಗಳು ವಿಚಾರಣಾ ವರದಿ ಸಲ್ಲಿಸಿದ ದಿ.7-7-01 ಮತ್ತು ಸದರಿ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಗಳಿಗೆ ಹಿಂತಿರುಗಿಸಿದ ದಿ.13-2-02.
8. ವಿಚಾರಣಾಧಿಕಾರಿಗಳು ಅಂತಿಮ ವಿಚಾರಣಾ ವರದಿ ಸಲ್ಲಿಸಿದ ದಿ.25-10-02.
9. 2ನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿದ ದಿ.13-2-03.
10. 2ನೇ ಕಾರಣ ಕೇಳುವ ನೋಟೀಸ್‌ಗೆ ಆಪಾದಿತ ಅಧಿಕಾರಿ:ನೌಕರರು ನೀಡಿದ ಲಿಖಿತ ಉತ್ತರದ, ದಿ.7-3-03.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ಪಾವಗಡ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗದಲ್ಲಿ ಮಾಡಿರುವ ಕಾಮಗಾರಿಗಳ ಅನುಷ್ಠಾನದಲ್ಲಿ ಗಂಗಾಸಾಗರ, ಜಯಚಾಮನಹಳ್ಳಿ, ಮರಿದಾಸರಹಳ್ಳಿ, ಇಲ್ಲಿ ಕಟ್ಟಲಾದ ಶಾಲಾ ಕಟ್ಟಡ, ನೀರು ಸರಬರಾಜು ನೈರ್ಮಲ್ಯ ಯೋಜನೆ ಹಾಗೂ ರಸ್ತೆ ಕಾಮಗಾರಿಗಳು ಮತ್ತು ಇನ್ನಿತರ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಲ್ಲಿ ಅವ್ಯವಹಾರ ನಡೆಸಿ ಸರ್ಕಾರದ ಹಣವನ್ನು ದುರುಪಯೋಗಪಡಿಸಿಕೊಂಡಿರುವರೆಂಬ ಬಗ್ಗೆ ಸದರಿ ಇಂಜಿನಿಯರಿಂಗ್ ಉಪವಿಭಾಗದಲ್ಲಿ ಅಂದು ಕಾರ್ಯನಿರ್ವಹಿಸುತ್ತಿದ್ದ ಶ್ರೀ ಹೆಚ್.ಎಸ್. ನಾಗರಾಜ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಇವರನ್ನು ಅಮಾನತ್ತುಗೊಳಿಸುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ತುಮಕೂರು ಇವರು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕೋರಿದ್ದರು. ಅಂತೆಯೇ ಸದರಿ ಅಧಿಕಾರಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (2)ರ

ಆದೇಶದಲ್ಲಿ ಇವರ ಮೇಲೆ ಇಲಾಖಾವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಲಾಗಿತ್ತು. ಮತ್ತು ಇದೇ ಆರೋಪಗಳಿಗೆ ಸಂಬಂಧಿಸಿದಂತೆ ಶ್ರೀ ಎಸ್.ಬಿ. ರಾಮಾಂಜನೇಯರೆಡ್ಡಿ ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಪಾವಗಡ ಇವರನ್ನು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿರವರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಸೇವೆಯಿಂದ ಅಮಾನತ್ತುಗೊಳಿಸಿದ್ದರು. ನಂತರ ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಸೂಚನಾ ಪತ್ರದೊಂದಿಗೆ ಇವರುಗಳ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಆಪಾದಿತ ಅಧಿಕಾರಿ:ನೌಕರರಿಗೆ ಕಾರಣ ಕೇಳುವ ನೋಟಿಸ್‌ನೊಂದಿಗೆ ಆರೋಪಪಟ್ಟಿ ಜಾರಿಮಾಡುವ ಮೂಲಕ ಕರ್ನಾಟಕ ನಾಗರೀಕ ಸೇವಾ (ವನಿಮೆ) ನಿಯಮ 1957ರ ನಿಯಮ 11ರಂತೆ ಇಲಾಖಾ ವಿಚಾರಣೆ ಹೂಡಲಾಗಿತ್ತು. ಆಪಾದಿತರು ಸದರಿ ನೋಟಿಸ್‌ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (5)ರಂತೆ ತಮ್ಮ ಲಿಖಿತ ಹೇಳಿಕೆ ನೀಡಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪ ಮುಕ್ತರನ್ನಾಗಿ ಮಾಡುವಂತೆ ಕೋರಿದ್ದರು.

ಮೇಲೆ ಓದಲಾದ ಕ್ರಮ ಸಂಖ್ಯೆ (6)ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವನಿಮೆ) ನಿಯಮ 1957ರ ನಿಯಮ 11(2)ರಂತೆ ಶ್ರೀ ಎಸ್.ಎಸ್. ಸಂಗೊಳ್ಳಿ, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಮತ್ತು ಅದೇ ನಿಯಮದ ನಿಯಮ 11(5)ರಡಿ ಉಪಕಾರ್ಯದರ್ಶಿ (ಆಡಳಿತ), ಜಿಲ್ಲಾ ಪಂಚಾಯತ್, ತುಮಕೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಯವರು ಈ ಪ್ರಕರಣದಲ್ಲಿ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ (7)ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಆಪಾದಿತರ ಮೇಲಿನ ಯಾವುದೇ ಆರೋಪ ಸಾಬೀತಾಗಿಲ್ಲವೆಂದು ವಿಚಾರಣಾ ವರದಿಯಲ್ಲಿ ತಿಳಿಸಿದ್ದರು. ಆದರೆ ಸದರಿ ವಿಚಾರಣಾ ವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದಾಗ ವಿಚಾರಣಾ ವರದಿಯಲ್ಲಿ ವಿವರಿಸಿರುವಂತೆ ವಿಚಾರಣಾಧಿಕಾರಿಗಳು ಆಪಾದಿತರ ಮೇಲಿನ ಆಪಾದನೆಗಳನ್ನು ಸದರಿ ಆಪಾದನೆಗಳಿಗೆ ಸಂಬಂಧಿಸಿದಂತೆ ಸಂಬಂಧಪಟ್ಟ ದಾಖಲಾತಿಗಳು, ವಿಡಿಯೋಪ್ರತಿ ಇತ್ಯಾದಿಗಳನ್ನು ವಿಚಾರಣೆಯಲ್ಲಿ ಪರಿಶೀಲಿಸದೆ ಕೇವಲ ಕಾರ್ಯಪಾಲಕ ಇಂಜಿನಿಯರ್ ರವರು ನೀಡಿದ್ದ ವರದಿಯ ಪ್ರತಿಯನ್ನು ಆಧರಿಸಿ ಹಾಗೂ ಕಾರ್ಯಪಾಲಕ ಇಂಜಿನಿಯರ್ ರವರು ನೀಡಿದ ಸಾಕ್ಷಿಯ ಆಧಾರದ ಮೇಲೆ ಆಪಾದಿತರ ಮೇಲಿನ ಯಾವುದೇ ಆರೋಪ ಸಾಬೀತಾಗಿಲ್ಲವೆಂಬ ನಿರ್ಣಯಕ್ಕೆ ಬಂದಿರುವುದು ಕಂಡು ಬಂದುದರಿಂದ, ವಿಚಾರಣಾಧಿಕಾರಿಗಳು ಈ ಬಗ್ಗೆ ನ್ಯಾಯ ದೊರಕಿಸುವಲ್ಲಿ ಸಾಕಷ್ಟು ಪ್ರಯತ್ನ ಮಾಡಿಲ್ಲವೆಂದು ಕಂಡು ಬಂದಿದ್ದರಿಂದ ಸದರಿ ನಿಯಮಗಳ ನಿಯಮ 11(ಎ)ರಂತೆ ಸರ್ಕಾರವು ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪದಿರಲು ನಿರ್ಣಯಿಸಿ ಪ್ರಕರಣದಲ್ಲಿ ಅಗತ್ಯವಿರುವ ಎಲ್ಲಾ ದಾಖಲೆಗಳನ್ನೂ ಪಡೆದು ವಿಚಾರಣೆ ನಡೆಸುವಂತೆ, ನಂತರ ವರದಿ ಸಲ್ಲಿಸುವಂತೆ ವಿಚಾರಣಾ ವರದಿಯನ್ನು ವಿಚಾರಣಾಧಿಕಾರಿಗಳಿಗೆ ದಿನಾಂಕ:13-2-02ರಲ್ಲಿ ಹಿಂತಿರುಗಿಸಲಾಗಿತ್ತು.

ವಿಚಾರಣಾಧಿಕಾರಿಯವರು ಪುನಃ ಈ ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ, ಮೇಲೆ ಓದಲಾದ ಕ್ರಮ ಸಂಖ್ಯೆ (8)ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಇಬ್ಬರು ಆಪಾದಿತರ ಮೇಲಿನ 11 ಆರೋಪಗಳಲ್ಲಿ 10 ಆರೋಪಗಳು ಸಾಬೀತಾಗಿರುತ್ತವೆಂದು ವರದಿ ಮಾಡಿದ್ದರು. ಆಪಾದಿತರ ಮೇಲಿನ ಆರೋಪ ಮತ್ತು ಆ ಬಗ್ಗೆ ವಿಚಾರಣಾಧಿಕಾರಿಗಳ ವರದಿಯು ಈ ಕೆಳಕಂಡಂತಿದೆ.

**ಆಪಾದನೆ-1**

ಗಂಗಾಸಾಗರ ಗ್ರಾಮ ಶಾಲಾ ಕೊಠಡಿ ನಿರ್ಮಾಣ ಕಾಮಗಾರಿಯಲ್ಲಿ ರೂ.2,13,288.00 ರೂಗಳ ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ:**

ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ವಿಡಿಯೋ ಚಿತ್ರೀಕರಣದಲ್ಲಿ ಶಾಲಾ ಕಟ್ಟಡದ ಮೇಲ್ಚಾವಣಿಯ ಒಳಭಾಗದಲ್ಲಿ ಕಬ್ಬಿಣದ ಸರಳುಗಳು ಹೊರಗೆ ಬರುತ್ತಿದ್ದು ಮೇಲ್ಚಾವಣಿ ಮತ್ತು ಆಧಾರದ ಗೋಡೆ ಕೂಡುವಲ್ಲಿ ಮೇಲ್ಚಾವಣಿ ಭಾಗಿದಂತೆ ಕಂಡುಬರುತ್ತಿದ್ದು, ಕಾರಣ ಈ ಕಾಮಗಾರಿ ಕಳಪೆಯಾಗಿತ್ತೆಂದೇ ನಿರ್ಣಯಿಸಬೇಕಾಗುತ್ತದೆಂದು ಆಪಾದನೆ ಸಾಬೀತಾಗುತ್ತದೆಂದು ವರದಿ ಮಾಡಿದ್ದಾರೆ.

ಆಪಾದಿಸಲಾದಂತೆ ಕಾಮಗಾರಿಗೆ ಹಣ ಖರ್ಚು ಮಾಡಿದ್ದರು ಕಾಮಗಾರಿ ಕಳಪೆಯಾಗಿರುವುದು ವಿಡಿಯೋ ಚಿತ್ರೀಕರಣದಲ್ಲಿ ಕಂಡುಬಂದಿದ್ದರಿಂದ ಸರ್ಕಾರದ ಹಣ ದುರುಪಯೋಗವಾಗಿರುವುದು ಕಂಡು ಬರುತ್ತದೆ.

**ಆಪಾದನೆ-2:-**

ಹೊನ್ನಸಮುದ್ರದಿಂದ ಯರಗಮ್ಮನಹಳ್ಳಿ ರಸ್ತೆಗೆ ಕ್ರಾಸ್‌ವೇ ನಿರ್ಮಾಣ ಕಾಮಗಾರಿಯಲ್ಲಿ ರೂ.49,244-00 ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ:-**

ಸದರಿ ಕಾಮಗಾರಿ ಬಗ್ಗೆ ವಿಚಾರಣಾ ಸಮಯದಲ್ಲಿ ಒದಗಿಬಂದ ದಾಖಲೆ ಹಾಗೂ ಸಾಕ್ಷಿಗಳ ಹಿನ್ನೆಲೆಯಲ್ಲಿ ಹಣ ಖರ್ಚಾಗಿರುವುದು ದಾಖಲೆಗಳಿಂದ ಕಂಡುಬರುತ್ತದೆ. ಖರ್ಚಾದ ಹಣಕ್ಕೆ ಸರಿಸಮವಾಗಿರಬೇಕಾದ ಕಾಮಗಾರಿ ಆಗಿರಲಿಲ್ಲವೆಂದು ಕಂಡುಬರುತ್ತದೆ. ಕಾರಣ ಈ ಬಗ್ಗೆ ಹೌದು ಎಂದು ಉತ್ತರಿಸುತ್ತೇನೆಂದು ವರದಿ ಮಾಡಿದ್ದಾರೆ.

**ಆಪಾದನೆ-3:-**

ಯರ್ರಮ್ಮನಹಳ್ಳಿ ಭೀಮನಕುಂಟೆ ಫೀಡರ್ ಹಳ್ಳಕ್ಕೆ ರೀವೆಟ್‌ಮೆಂಟ್ ಕಾಮಗಾರಿ ಬಾಬ್ತು ರೂ.1,35,525-00 ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ:-**

ವಿಡಿಯೋ ಕ್ಯಾಸೆಟ್‌ನ್ನು ವಿಚಾರಣ ಸಮಯದಲ್ಲಿ ಪರಿಶೀಲಿಸಿ ಖರ್ಚಾದ ಹಣಕ್ಕೆ ಸರಿ ಸಮವಾಗಿರಬೇಕಾದ ಕಾಮಗಾರಿಯಾಗಿರಲಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

**ಆಪಾದನೆ-4:-**

ಯರ್ರಮ್ಮನಹಳ್ಳಿ ಗ್ರಾಮದ ಬಳಿ ಪಿಕಪ್‌ನ್ನು ಎತ್ತರಿಸಲು ರೂ.14,137-00 ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ**

ವಿಡಿಯೋ ಕ್ಯಾಸೆಟ್‌ನ್ನು ವಿಚಾರಣ ಸಮಯದಲ್ಲಿ ಪರಿಶೀಲಿಸಿ ಖರ್ಚಾದ ಹಣಕ್ಕೆ ಸರಿ ಸಮವಾಗಿರಬೇಕಾದ ಕಾಮಗಾರಿಯಾಗಿರಲಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ.

**ಆಪಾದನೆ-5:-**

ಯರ್ರಮ್ಮನಹಳ್ಳಿ ರಸ್ತೆ ಬಗ್ಗೆ ಕಾಮಗಾರಿಯಲ್ಲಿ 59,737 ರೂ.ಗಳನ್ನು ಕೂಲಿಗಾಗಿ ವೆಚ್ಚ ಮಾಡಿ ಅಂದಾಜಿನಂತೆ ಕಾಮಗಾರಿ ಮಾಡದೆ ಹಣ ದುರುಪಯೋಗ ಮಾಡಿಕೊಂಡಿದ್ದಾರೆಂಬ ಬಗ್ಗೆ.

**ವಿಚಾರಣಾಧಿಕಾರಿಯವರ ತೀರ್ಮಾನ:-**

ಒದಗಿಸಲಾದ 2 ವಿಡಿಯೋಗಳಲ್ಲಿ ಕಂಡು ಬಂದ ಸಂಗತಿಗಳನ್ನು ಗಮನಿಸಿದಾಗ ರಸ್ತೆ ಹಣ ಖರ್ಚಾದಷ್ಟು ಅಭಿವೃದ್ಧಿ ಪಡಿಸಲಾಗಿದೆಯೆಂದು ಆರೋಪ ಸಾಬೀತಾಗಿಲ್ಲವೆಂದು ವರದಿ ಮಾಡಿದ್ದಾರೆ.

**ಆಪಾದನೆ 6:**

ತಿಪ್ಪಗಾನಹಳ್ಳಿ ರಾಮಕೃಷ್ಣಪುರ ಪಿಕ-ಅಪ್ ಕಾಮಗಾರಿಯಲ್ಲಿ 70,000 ರೂ.ಗಳ ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ:-**

ವಿಡಿಯೋ ಚಿತ್ರೀಕರಣದಲ್ಲಿ ರಿವೆಟ್ ಮೆಂಟ್ ಸಾಕಷ್ಟು ಸ್ಥಳದಲ್ಲಿ ಕಿತ್ತುಹೋಗಿದ್ದು ಕಾಣುತ್ತದೆ. ಅಂದರೆ ಮಾಡಲಾದ ಕಾಮಗಾರಿ ಕಳಪೆಯಾಗಿತ್ತು. ಎನ್ನಬೇಕಾಗುತ್ತದೆ ಕಾರಣ ಈ ಅಂಶವನ್ನು ಹೌದು ಎಂದು ಉತ್ತರಿಸುತ್ತೇನೆಂದಿದ್ದಾರೆ.

**ಆಪಾದನೆ-7:-**

ಮರಿದಾಸನಹಳ್ಳಿ ಗ್ರಾಮ ಪ್ರೌಢಶಾಲಾ ಕಾಮಗಾರಿಯಲ್ಲಿ ರೂ. 1,20,000-00 ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ**

ವಿಡಿಯೋ ಕ್ಯಾಸೆಟ್‌ನಲ್ಲಿ ಹಳೆಯ ಕಟ್ಟಡ ಕಂಡು ಬರುತ್ತಿತ್ತು ವರಾಂಡ ಕಿತ್ತು ಹೋಗಿತ್ತು ಎಂದರೆ ಕಾಮಗಾರಿ ತುಂಬಾ ಕಳಪೆಯಾಗಿತ್ತು ಎನ್ನುವುದನ್ನು ಬಿಟ್ಟು ಬೇರೆ ನಿರ್ಣಯಕ್ಕೆ ಬರಲು ಆಗದು. ಕಾರಣ ಈ ಅಂಶವನ್ನು ಹೌದು ಎಂದು ಉತ್ತರಿಸುತ್ತೇನೆಂದಿದ್ದಾರೆ.

**ಆಪಾದನೆ-8:-**

ಮರಿದಾಸನಹಳ್ಳಿ ಕುಡಿಯುವ ನೀರಿನ ಯೋಜನೆಯಲ್ಲಿ ರೂ.47,464-00 ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ**

ಆಪಾದಿತರು ಪೈಪುಗಳನ್ನು ತೆಗೆದುಕೊಂಡಿರಲಿಲ್ಲವೆನ್ನಲುಬಾರದು ಉಗ್ರಾಣದಿಂದ ಸರಕುಗಳನ್ನು ಪಡೆದ ದಾಖಲೆಗಳು ಅಂದಾಜು ಪತ್ರಿಕೆ ಹಾಗೂ ಬಿಲ್ಲಿನಲ್ಲಿ ಆಗಿದ್ದ ಖರ್ಚು ಆಧರಿಸಿ ಆಪಾದಿಸಲಾದ ಆಪಾದನೆಯನ್ನು ಹೌದು ಎಂದು ಉತ್ತರಿಸುತ್ತೇನೆಂದಿದ್ದಾರೆ.

**ಆಪಾದನೆ-9:-**

ಮರಿದಾಸನಹಳ್ಳಿ ಶಾಲಾ ರಸ್ತೆ ಡಾಂಬರೀಕರಣ ಕಾಮಗಾರಿಯಲ್ಲಿ 63,349-00 ರೂ. ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ**

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಕಾಮಗಾರಿ ಪರಿಶೀಲನೆ ಮಾಡಿದಾಗ ಆಪಾದಿತರು ಹಾಜರಿದ್ದದ್ದು ಒಪ್ಪಲಾದ ಸಂಗತಿ ಹಾಗೂ ರಸ್ತೆ ಡಾಂಬರೀಕರಣ ಮಾಡಿರಲಿಲ್ಲ, ಜಲ್ಲಿಜಮಾವಣೆ ಮಾಡಿದ್ದೆವು ಎಂದು ಆಪಾದಿತರು ಒಪ್ಪಿರುವುದರಿಂದ ಈ ಅಂಶವನ್ನು ಹೌದು ಎಂದು ಉತ್ತರಿಸುತ್ತೇನೆಂದಿದ್ದಾರೆ.

**ಆಪಾದನೆ-10:-**

ಸಾಸಲುಕುಂಟೆ ಗ್ರಾಮದ ಹಾಲಪ್ಪನಕಟ್ಟೆ ಏರಿಯ ಕಾಮಗಾರಿಯಲ್ಲಿ ರೂ.1,12,878-00 ಹಣ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ:**

ಲಭ್ಯ ದಾಖಲಾತಿಗಳ ಪ್ರಕಾರ ಈ ಆಪಾದನೆ ಸಾಬೀತಾಗುವುದಿಲ್ಲವೆಂದು ವರದಿ ಮಾಡಿದ್ದಾರೆ.

**ಆಪಾದನೆ-11:-**

ಭರಮಯ್ಯನಪಾಳ್ಯ ನಿಡಗಲ್ ಇನ್ನಿತರ 5 ಗ್ರಾಮಗಳ ಕಿರುನೀರು ಸರಬರಾಜು ಯೋಜನೆಗಳ ಬಗ್ಗೆ, ಪಿವಿಸಿ ಪೈಪ್ ಅಳವಡಿಕೆ ಕಾಮಗಾರಿಯಲ್ಲಿ ರೂ.1,53,592-00 ರೂ.ಗಳ ಕಾಮಗಾರಿ ದುರುಪಯೋಗ.

**ವಿಚಾರಣಾಧಿಕಾರಿಯವರ ತೀರ್ಮಾನ**

ಆಪಾದಿತರು ತಾವು ತಪ್ಪು ಮಾಡಿಲ್ಲವೆನ್ನುವುದಕ್ಕೆ ಪೊಲೀಸರು ಸಲ್ಲಿಸಿದ **ಬಿ ರಿಪೋರ್ಟ್** ಆಧರಿಸುತ್ತಾರೆ. ಪೊಲೀಸ್ ತನಿಖೆ ವ್ಯಾಪ್ತಿ ಬೇರೆ ಈ ಇಲಾಖಾ ವಿಚಾರಣಾ ವ್ಯಾಪ್ತಿ ಬೇರೆ. ಈ ಬಗ್ಗೆ ಐ.ಎಲ್.ಆರ್. 2001 ಕರ್ನಾಟಕ 229 ರಲ್ಲಿನ ಸಿದ್ಧಾಂತವನ್ನು ಈಗ ಹಾಜರು ಪಡಿಸಿರುವ ಒಪ್ಪತಕ್ಕಂತಹ ಸಾಕ್ಷ್ಯವನ್ನು ಕ್ರಮ ಆಪಾದಿತರ ಒಪ್ಪಿಗೆಗಳನ್ನು ಪರಿಶೀಲಿಸಿದಾಗ ಆಧರಿಸಬಾರದು. ಆಪಾದಿತರು ಪೈಪ್‌ಗಳನ್ನು ತೆಗೆದುಕೊಂಡಿಲ್ಲವೆನ್ನುವುದು ಅಪ್ಪಟ ಸುಳ್ಳು ಎನ್ನುವುದು ದಾಖಲೆಗಳಿಂದ ಕಂಡು ಬರುತ್ತದೆ. ಕಾರಣ ಹೆಚ್ಚಿನ ಚರ್ಚೆ ಮಾಡದೆ ಈ ಅಂಶವನ್ನು ಹೌದು ಎಂದು ಉತ್ತರಿಸುತ್ತೇನೆಂದಿದ್ದಾರೆ.

ಸರ್ಕಾರವು ವಿಚಾರಣಾ ವರದಿಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಅದನ್ನು ಒಪ್ಪಲು ನಿರ್ಧರಿಸಿ ವಿಚಾರಣಾ ವರದಿಯ ಪ್ರತಿಯೊಂದಿಗೆ ಇಬ್ಬರು ಆಪಾದಿತರುಗಳಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ (9)ರ ಪತ್ರದಲ್ಲಿ 2ನೇ ಕಾರಣ ಕೇಳುವ ನೋಟೀಸ್ ಜಾರಿ ಮಾಡಿತ್ತು. ಸದರಿ ಆಪಾದಿತರುಗಳು ತಮ್ಮ ಲಿಖಿತ ಹೇಳಿಕೆ ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆಪಾದನೆಯಿಂದ ಮುಕ್ತಗೊಳಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (10)ರಲ್ಲಿ ಕೋರಿದ್ದರು. 2ನೇ ಕಾರಣ ಕೇಳುವ ನೋಟೀಸ್‌ಗೆ

ಆಪಾದಿತರುಗಳ ನೀಡಿರುವ ಹೇಳಿಕೆಯನ್ನು ಸರ್ಕಾರವು ಪರಿಶೀಲಿಸಿ ಅವುಗಳಲ್ಲಿ ಪರಿಶೀಲನೆಗೆ ಒಳಪಡಿಸಬೇಕಾದ ಯಾವುದೇ ಹೊಸ ಅಂಶಗಳೂ ಕಂಡುಬಾರದಿದ್ದುದರಿಂದ ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪಿ ಅದರಂತೆ ಆಪಾದಿತರುಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟವನ್ನು ವಸೂಲ್ಮಾಡಲು ಹಾಗೂ ಅವರ ಕರ್ತವ್ಯಲೋಪಕ್ಕೆ ಸಂಬಂಧಿಸಿದಂತೆ ಸೂಕ್ತದಂಡನೆಯನ್ನು ವಿಧಿಸಲು ಸರ್ಕಾರವು ನಿರ್ಣಯಿಸಿದೆ. ಅದರಂತೆ ವಿಚಾರಣಾಧಿಕಾರಿಗಳ ವಿಚಾರಣಾ ವರದಿಯಲ್ಲಿನಂತೆ ಕಾಮಗಾರಿಗೆ ಹಣ ಖರ್ಚು ಮಾಡಿದ್ದರೂ ಸಹಾ ಕಾಮಗಾರಿ ಕಳಪೆಯಾಗಿರುವುದರಿಂದ ಸರ್ಕಾರದ ಹಣ ದುರುಪಯೋಗವಾಗಿರುವುದು ಕಂಡು ಬರುತ್ತದೆ. ಆಪಾದಿತರಿಂದ ಈ ಕಾಮಗಾರಿಗೆ ಇಂತಿಷ್ಟೇ ಹಣ ದುರುಪಯೋಗವಾಗಿದೆಯೆಂದು ನಿಖರವಾಗಿ ಹೇಳಲಾಗುತ್ತಿಲ್ಲವಾದ್ದರಿಂದ ಕಿರಿಯ ಇಂಜಿನಿಯರ್ ಇವರು ಕಾಮಗಾರಿಯನ್ನು ಅನುಷ್ಠಾನಗೊಳಿಸುವ ಅಧಿಕಾರಿಯಾಗಿದ್ದು ಮತ್ತು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಮೇಲ್ವಿಚಾರಣೆ ನಡೆಸುವ ಅಧಿಕಾರಿಯಾಗಿರುವುದರಿಂದ ಹಾಗಾಗಿ ಕಾಮಗಾರಿಗೆ ಬಿಡುಗಡೆ ಮಾಡಿದ ಹಣದಲ್ಲಿ ಶೇಕಡ 20ರಷ್ಟು ಹಣ ದುರುಪಯೋಗವಾಗಿದೆಯೆಂದು ಶಿಸ್ತುಪ್ರಾಧಿಕಾರವಾದ ಸರ್ಕಾರವು ನಿರ್ಧರಿಸಿ ದುರುಪಯೋಗದ ಮೊತ್ತಕ್ಕೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ ಕಿರಿಯ ಇಂಜಿನಿಯರ್ ಇಬ್ಬರೂ ಜವಾಬ್ದಾರರಾಗಿರುವುದರಿಂದ ಇವರುಗಳು ಕ್ರಮವಾಗಿ ಶೇಕಡ 5 ಮತ್ತು 15ರಂತೆ ನಷ್ಟಕ್ಕೆ ಜವಾಬ್ದಾರರೆಂದು ನಿರ್ಧರಿಸಿ ಆಪೈಕಿ ಆಪಾದನೆ 1,6,7 ರಬಾಬ್ತು ಶ್ರೀ ಹೆಚ್.ಎಸ್. ನಾಗರಾಜ್ ಸಕಾಇಂ ಇವರಿಂದ ಕ್ರಮವಾಗಿ ರೂ.8,000, 3,500, 4,732ಗಳನ್ನು ಅಂದರೆ ಒಟ್ಟು 16,232ರೂಗಳನ್ನು ಮತ್ತು ಕಿಇಂರಾದ ಶ್ರೀರಾಮಾಂಜನೇಯರೆಡ್ಡಿ ಇವರಿಂದ ಆಪಾದನೆ ಸಂಖ್ಯೆ 1,4,6,7,8,9,11ರ ಬಾಬ್ತು ಕ್ರಮವಾಗಿ ರೂ. 31,592, 14,137, 10,500, 14,196, 47,464, 63,349, 34,592 ಅಂದರೆ ಒಟ್ಟು 2,37,238 ರೂಗಳನ್ನು ಇವರಿಂದ ವಸೂಲು ಮಾಡಲು ನಿರ್ಧರಿಸಿರುವುದರೊಂದಿಗೆ ಮೇಲಿನ ಆರೋಪಗಳೊಂದಿಗೆ ಉಳಿದ ಆರೋಪಗಳಲ್ಲಿ ಅವರ ಮೇಲೆ ಸಾಬೀತಾದ ಕರ್ತವ್ಯಲೋಪದ ಆಪಾದನೆಗೆ ಸಂಬಂಧಿಸಿದಂತೆ ಸೂಕ್ತದಂಡನೆ ವಿಧಿಸಲು ಸರ್ಕಾರವು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ ಗ್ರಾಅಪ 12 ಇಎನ್‌ಕ್ಯೂ 2000, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 1996-97ನೇ ಸಾಲಿನಲ್ಲಿ ಪಾವಗಡ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗದಲ್ಲಿ ಮಾಡಿರುವ ಕಾಮಗಾರಿಗಳ ಅನುಷ್ಠಾನದಲ್ಲಿ ಗಂಗಾಸಾಗರ, ಜಯಚಾಮನಹಳ್ಳಿ, ಮರಿದಾಸರಹಳ್ಳಿ ಇಲ್ಲಿ ಕಟ್ಟಲಾದ ಶಾಲಾ ಕಟ್ಟಡ, ಹಾಗೂ ಇನ್ನಿತರ ಅಭಿವೃದ್ಧಿ ಕಾಮಗಾರಿಗಳಲ್ಲಿ ಕರ್ತವ್ಯಲೋಪವೆಸಗಿ, ಸರ್ಕಾರಕ್ಕೆ ಆರ್ಥಿಕ ನಷ್ಟಉಂಟು ಮಾಡಿರುವರೆಂಬ ಆರೋಪಗಳಿಗೆ ಸಂಬಂಧಿಸಿದಂತೆ ಸಾಬೀತಾದ ಆಪಾದನೆಗಳಿಗಾಗಿ, ಶ್ರೀ ಹೆಚ್.ಎಸ್. ನಾಗರಾಜ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಪಾವಗಡ (ಹಾಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ವೃತ್ತ, ಬಳ್ಳಾರಿ) ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತ ರೂ.16,232-00ಗಳನ್ನು ಅವರ ವೇತನದಿಂದ ಕರ್ನಾಟಕ ನಾಗರೀಕ ಸೇವಾ (ವನಿಮೆ) ನಿಯಮ 1957ರ ನಿಯಮ 8 (IV) ರಂತೆ ವಸೂಲು ಮಾಡಲು ಹಾಗೂ ಸದರಿ ನಿಯಮದನಿಯಮ (iv(ಎ)ರಂತೆ ಇವರು ಹಾಲಿ ವೇತನ ಪಡೆಯುತ್ತಿರುವ ಕಾಲಿಕ ವೇತನ ಶ್ರೇಣಿಯಲ್ಲಿ ಇವರ ವೇತನದ ಒಂದು ಹಂತವನ್ನು ಸಂಚಿತ ಪರಿಣಾಮರಹಿತವಾಗಿ ಕೆಳಕ್ಕಿಳಿಸುವ ದಂಡನೆಯನ್ನು ವಿಧಿಸಲು, ಮತ್ತು ಶ್ರೀ ಎಸ್.ಬಿ. ರಾಮಾಂಜನೇಯರೆಡ್ಡಿ ಅಂದಿನ ಕಿರಿಯ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಪಾವಗಡ (ಹಾಲಿ ಕಿರಿಯ ಇಂಜಿನಿಯರ್, ತಾಲ್ಲೂಕು ಪಂಚಾಯತ್, ಶೃಂಗೇರಿ) ಇವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತ ರೂ.2,37,238-00ಗಳನ್ನು ನಿಯಮ 8 (IV)ರಂತೆ ಅವರ ವೇತನದಿಂದ ವಸೂಲು ಮಾಡಲು ಹಾಗೂ ನಿಯಮ 8 (iii)ರಂತೆ ಇವರ ಮುಂದಿನ ಐದು ವಾರ್ಷಿಕ ವೇತನಬಡ್ತಿಗಳನ್ನು ಸಂಚಿತ ಪರಿಣಾಮದೊಂದಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಲು ಸರ್ಕಾರವು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎ. ಹೊನ್ನಪ್ಪ ನಾಯಕ್**
ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

ಪಿ.ಆರ್. 1113

## ಕಂದಾಯ ಸಚಿವಾಲಯ

**ವಿಷಯ:** ಅಖಿಲ ಭಾರತ ವೀರಶೈವ ಮಹಾಸಭಾ (ರಿ), ಬೆಂಗಳೂರು ಈ ಸಂಸ್ಥೆಗೆ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ವಿನಾಯಿತಿ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಕಂಇ 458 ಮುನೋಮು 2002, ದಿನಾಂಕ:29.7.2003 ಹಾಗೂ 1.8.2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರದ ಆದೇಶಗಳಲ್ಲಿ ಕರ್ನಾಟಕ ಮುದ್ರಾಂಕ ಅಧಿನಿಯಮ 1957ರ (1957ರ ಕರ್ನಾಟಕ ಕಾಯ್ದೆ 34) ಕಲಂ 9(1)(ಎ) ಮತ್ತು ನೋಂದಣಿ ಕಾಯ್ದೆ 1908 ರ ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಖಿಲ ಭಾರತ ವೀರಶೈವ ಮಹಾಸಭಾ (ರಿ), ಬೆಂಗಳೂರು ಈ ಸಂಸ್ಥೆಗೆ ಸದಾಶಿವನಗರದ ನಂ.602/ಎ-1, ರಮಣ ಮಹರ್ಷಿ ರಸ್ತೆಯಲ್ಲಿರುವ 10708.5 ಚದರ ಅಡಿ ನಿವೇಶನ ಖರೀದಿಗೆ ತಗಲುವ ಮುದ್ರಾಂಕ ಶುಲ್ಕದ ಶೇಕಡ 50 ರಷ್ಟು ವಿನಾಯಿತಿ ಹಾಗೂ ಪ್ರತಿ 1000-00 ರೂ.ಗಳಿಗೆ ರೂ.1-00 ರಂತೆ ನೋಂದಣಿ ಶುಲ್ಕ ವಿನಾಯಿತಿ ನೀಡಿದೆ. ಈ ವಿಷಯವನ್ನು ಪುನರ್ ಪರಿಶೀಲಿಸಿ ಈ ಕೆಳಗಿನಂತೆ ಸರ್ಕಾರವು ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 458 ಮುನೋಮು 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಮುದ್ರಾಂಕ ಅಧಿನಿಯಮ 1957ರ (1957ರ ಕರ್ನಾಟಕ ಕಾಯ್ದೆ 34) ಕಲಂ 9 (1) (ಎ) ಮತ್ತು ನೋಂದಣಿ ಕಾಯ್ದೆ 1908ರ ಕಲಂ 78 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಖಿಲ ಭಾರತ

ವೀರಶೈವ ಮಹಾಸಭಾ (ರಿ), ಬೆಂಗಳೂರು, ಇವರು ಬೆಂಗಳೂರು ನಗರದ ಸದಾಶಿವನಗರದ ಸಂಖ್ಯೆ: 602/ಎ:1, ರಮಣ ಮಹರ್ಷಿ ರಸ್ತೆಯಲ್ಲಿ ಇರುವ 10708.5 ಚದರ ಅಡಿ ನಿವೇಶನದ ಖರೀದಿಗೆ ತಗಲುವ ಮುದ್ರಾಂಕ ಶುಲ್ಕ ಹಾಗೂ ನೋಂದಣೆ ಶುಲ್ಕಕ್ಕೆ ಶೇಕಡ 100 ರಷ್ಟು ವಿನಾಯಿತಿ ನೀಡಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶೈಲಮ್ಮ**

ಪಿ.ಆರ್. 1114 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಸಹಕಾರ ಸಚಿವಾಲಯ

**ವಿಷಯ:** ಕೃಷಿ ಮಾರಾಟ ಇಲಾಖೆಯ ತಾಂತ್ರಿಕ ವಿಭಾಗದ ತಾಂತ್ರಿಕ ಹಾಗೂ ಸಂಬಂಧಿತ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಮಾತೂ 59 ಮಾಇಸೇ 95, ದಿನಾಂಕ: 25/07/1995.
2. ಸರ್ಕಾರದ ಆದೇಶ ಸಂಖ್ಯೆ: ಸಮಾತೂ 63 ಮಾಇಸೇ 99, ದಿನಾಂಕ: 16/06/1999.
3. ಸರ್ಕಾರದ ಆದೇಶ ಸಂಖ್ಯೆ: ಸಮಾತೂ 113 ಮಾಇಸೇ 2000, ದಿನಾಂಕ: 19/07/2000.
4. ಸರ್ಕಾರದ ಆದೇಶ ಸಂಖ್ಯೆ: ಸಇ 144 ಮಾಇಸೇ 2001, ದಿನಾಂಕ: 26/07/2001.
5. ಸರ್ಕಾರದ ಆದೇಶ ಸಂಖ್ಯೆ: ಸಇ 55 ಎಂಆರ್ಇ 2002, ದಿನಾಂಕ: 11/03/2002.
6. ಕೃಷಿ ಮಾರಾಟ ನಿರ್ದೇಶಕರ ಪತ್ರ ಸಂಖ್ಯೆ: ಕೃಮಾಇ/28/ಸಿಬ್ಬಂದಿ-1(ಎ)/2003, ದಿನಾಂಕ: 15/03/2003.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1),(2),(3),(4) ಮತ್ತು (5) ರಲ್ಲಿ ಓದಲಾದ ಆದೇಶಗಳಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ಕೈಗೊಳ್ಳುವ ಅಭಿವೃದ್ಧಿ ಕಾರ್ಯಗಳ ನಿರ್ವಹಣೆಗಾಗಿ ತಾಂತ್ರಿಕ ವಿಭಾಗವನ್ನು ಅವುಗಳ ಹುದ್ದೆಗಳ ಸಮೇತ ಹಾಗೂ ತಾಂತ್ರಿಕೇತರ ಸಿಬ್ಬಂದಿಗಳನ್ನು ಮಂಜೂರು ಮಾಡಿದ್ದು, ಈ ಹುದ್ದೆಗಳನ್ನು ಆಗಿಂದಾಗ್ಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ. ಈ ಹುದ್ದೆಗಳ ಅವಧಿಯು ದಿನಾಂಕ:31.03.2003ಕ್ಕೆ ಅಂತ್ಯಗೊಂಡಿರುತ್ತದೆ. 2002-2003ನೇ ಸಾಲಿನಲ್ಲಿ ರಾಜ್ಯ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳಲ್ಲಿ ರೂ.3112.33 ಲಕ್ಷಗಳ ಅಂದಾಜು ವೆಚ್ಚದಲ್ಲಿ ಸುಮಾರು 1042 ಅಭಿವೃದ್ಧಿ ಕೆಲಸಗಳನ್ನು ತೆಗೆದುಕೊಳ್ಳಲು ಉದ್ದೇಶಿಸಲಾಗಿರುತ್ತದೆ. ಹಾಗೂ ರಾಜ್ಯದ ಆರ್.ಐ.ಡಿ.ಎಫ್.-6 ಮತ್ತು 7 ನೇ ಯೋಜನೆಯಡಿಯಲ್ಲಿ ವಿವಿಧ ಗ್ರಾಮೀಣ ಸಂತೆಗಳನ್ನು ರೂ.225.94 ಲಕ್ಷಗಳ ವೆಚ್ಚದಲ್ಲಿ ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದೆ. ಆದುದರಿಂದ ಸದರಿ ಹುದ್ದೆಗಳನ್ನು ದಿನಾಂಕ:01.04.2003 ರಿಂದ ಮತ್ತೆ ಮೂರು ವರ್ಷದ ಅವಧಿಗೆ ಮುಂದುವರೆಸಲು ಕೃಷಿ ಮಾರಾಟ ಇಲಾಖೆಯ ನಿರ್ದೇಶಕರು ಮೇಲೆ ಓದಲಾದ (6)ರ ಪತ್ರದಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗೆ ಸೂಚಿಸಿದಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 122 ಎಂಆರ್ಇ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಕೃಷಿ ಮಾರಾಟ ಇಲಾಖೆಯ ತಾಂತ್ರಿಕ ವಿಭಾಗದ ತಾಂತ್ರಿಕ ಹಾಗೂ ತಾಂತ್ರಿಕೇತರ ಸಿಬ್ಬಂದಿ ಹುದ್ದೆಗಳನ್ನು ಈ ಆದೇಶದ ಅನುಬಂಧ-ಅ ರಿಂದ ಅನುಬಂಧ-ಈ ವರಗೆಯಿರುವ ತಃಖ್ತೆಯಲ್ಲಿ ಸೂಚಿಸಿರುವ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ಅಂದರೆ ದಿನಾಂಕ:1.4.2003 ರಿಂದ 31.03.2004 ರವರೆಗೆ ಮುಂದುವರೆಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ **375-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆಗಳ ವಿನಿಮಯ-05-ಮಾರುಕಟ್ಟೆ ಇಂಜಿನಿಯರಿಂಗ್ ಕೋಶದ ಅಭಿವೃದ್ಧಿಗಾಗಿ ಯೋಜನೆ (ಯೋಜನೇತರ)** (3475-00-107-0-05) ಲೆಕ್ಕ ಶೀರ್ಷಿಕೆಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ನೀಡಿರುವ ಪ್ರತ್ಯಾಯೋಜನೆಯ ಅನುಸಾರವಾಗಿ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಆದೇಶ ಸಂಖ್ಯೆ: ಅಪಜೀ 441 ಆಂಆಸ 2003(ಎ), ದಿನಾಂಕ: 26.08.2003 ರಲ್ಲಿ ನೀಡಲಾದ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

### ಅನುಬಂಧ-ಅ

**ಸರ್ಕಾರಿ ಆದೇಶ ಸಂಖ್ಯೆ: ಸಇ 122 ಎಂಆರ್ಇ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ವೇತನ ಶ್ರೇಣಿ ರೂ. | ಒಟ್ಟು ಹುದ್ದೆಗಳು |
|---|---|---|---|
| 1 | 2 | 3 | 4 |
| 1. | ಕಾರ್ಯಪಾಲಕ ಅಭಿಯಂತರರು | 9580-14200 | 3 |
| 2. | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು/ತಾಂತ್ರಿಕ ಸಹಾಯಕರು | 7400-13120 | 15 |
| 3. | ಸಹಾಯಕ ಅಭಿಯಂತರರು | 6000-11200 | 57 |

| 1 | 2 | 3 | 4 |
|---|---|---|---|
| 4. | ಕಿರಿಯ ಅಭಿಯಂತರರು | 4575-8400 | 9 |
| 5. | ಆಕೃತಿ ರಚನಾಕಾರರು | 4575-8400 | 15 |
| 6. | ಲೆಕ್ಕಾಧೀಕ್ಷಕರು | 5200-9580 | 3 |
| 7. | ಮ್ಯಾನೇಜರ್ ದರ್ಜೆ-2 | 5200-9580 | 3 |
| 8. | ಪ್ರಥಮ ದರ್ಜೆ ಸಹಾಯಕರು | 3850-7050 | 17 |
| 9. | ದ್ವಿತೀಯ ದರ್ಜೆ ಸಹಾಯಕರು / ದಾಸ್ತಾನುಗಾರ | 3000-5450 | 25 |
| 10. | ಬೆರಳಚ್ಚುಗಾರರು | 3000-5450 | 18 |
| 11. | ವಾಹನ ಚಾಲಕರು | 3000-5450 | 15 |
| 12. | ಸಿಪಾಯಿ | 2500-3850 | 37 |

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಅನುಬಂಧ-ಆ**

**ಸರ್ಕಾರಿ ಆದೇಶ ಸಂಖ್ಯೆ: ಸಇ 122 ಎಂಆರ್ಇ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

| ಕ್ರಮ ಸಂಖ್ಯೆ | | ಹುದ್ದೆಗಳ ಪದನಾಮ | ವೇತನ ಶ್ರೇಣಿ ರೂ. | ಒಟ್ಟು ಹುದ್ದೆಗಳು |
|---|---|---|---|---|
| ಅ | ಕಾರ್ಯನಿರ್ವಾಹಕ ಅಭಿಯಂತರರು, ಮಾರುಕಟ್ಟೆ ಅಭಿವೃದ್ಧಿ ಯೋಜನೆ, ಮೈಸೂರು ಹಾಗೂ ತತ್ಸಂಬಂಧ ಹುದ್ದೆಗಳು | | | |
| ಆ | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಮಾರುಕಟ್ಟೆ ಅಭಿವೃದ್ಧಿ ಯೋಜನೆ ವಿಜಾಪುರ, ಸಿರಸಿ, ಹುಬ್ಬಳ್ಳಿ ಹಾಗೂ ಇತರೆ ತತ್ಸಂಬಂಧ ಹುದ್ದೆಗಳು | | | |
| | 1. | ಕಾರ್ಯನಿರ್ವಾಹಕ ಅಭಿಯಂತರರು | 9580-14200 | 1 |
| | 2. | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ತಾಂತ್ರಿಕ ಸಹಾಯಕರು | 7400-13120 | 1 |
| | 3. | ಸಹಾಯಕ ಅಭಿಯಂತರರು | 6000-11200 | 3 |
| | 4. | ಆಕೃತಿ ರಚನಾಕಾರರು | 4575-8400 | 1 |
| | 5. | ಲೆಕ್ಕಾಧೀಕ್ಷಕರು | 5200-9580 | 1 |
| | 6. | ಮ್ಯಾನೇಜರ್ ದರ್ಜೆ-2 | 5200-9580 | 1 |
| | 7. | ಪ್ರಥಮ ದರ್ಜೆ ಸಹಾಯಕರು | 3850-7050 | 1 |
| | 8. | ದ್ವಿತೀಯ ದರ್ಜೆ ಸಹಾಯಕರು / ದಾಸ್ತಾನುಗಾರರು | 3000-5450 | 1 |
| | 9. | ದ್ವಿತೀಯ ದರ್ಜೆ ಸಹಾಯಕರು | 3000-5450 | 1 |
| | 10. | ಬೆರಳಚ್ಚುಗಾರರು | 3000-5450 | 2 |
| | 11. | ವಾಹನ ಚಾಲಕರು | 3000-5450 | 1 |
| | 12. | ಸಿಪಾಯಿ | 2500-3850 | 3 |

**ಬೆಳಗಾಂ ಉಪ ವಿಭಾಗದ ಹುಬ್ಬಳ್ಳಿ, ಸಿರಸಿ ಹಾಗೂ ವಿಜಾಪುರ ಉಪ ವಿಭಾಗಗಳ ಸಿಬ್ಬಂದಿ**

| | | | |
|---|---|---|---|
| 1. | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು | 7400-13120 | 3 |
| 2. | ಪ್ರಥಮ ದರ್ಜೆ ಸಹಾಯಕರು | 3850-7050 | 3 |
| 3. | ಬೆರಳಚ್ಚುಗಾರರು | 3000-5450 | 3 |
| 4. | ವಾಹನ ಚಾಲಕರು | 3000-5450 | 3 |
| 5. | ಸಿಪಾಯಿ | 2500-3850 | 6 |

**ಸಹಾಯಕ ಅಭಿಯಂತರರ ಹೆಚ್ಚಿನ ಹುದ್ದೆಗಳು**

| | | | |
|---|---|---|---|
| 1. | ಸಹಾಯಕ ಅಭಿಯಂತರರು | 6000-11200 | 16 |

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಅನುಬಂಧ-ಇ**

**ಸರ್ಕಾರಿ ಆದೇಶ ಸಂಖ್ಯೆ: ಸಇ 122 ಎಂಆರ್ಇ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ವೇತನ ಶ್ರೇಣಿ ರೂ. | ಒಟ್ಟು ಹುದ್ದೆಗಳು |
|---|---|---|---|
| 1 | 2 | 3 | 4 |
| **ಮಾರುಕಟ್ಟೆ ಅಭಿವೃದ್ಧಿ ಯೋಜನೆಯ ಅಧೀಕ್ಷಕ ಅಭಿಯಂತರರು ಹಾಗೂ ತತ್ಸಂಬಂಧ ಹುದ್ದೆಗಳು** | | | |
| 1. | ಅಧೀಕ್ಷಕ ಅಭಿಯಂತರರು | 10620-14960 | 1 |

| 1 | 2 | 3 | 4 |
|---|---|---|---|
| 2. | ಅಧೀಕ್ಷಕ ಅಭಿಯಂತರರು/ತಾಂತ್ರಿಕ ಸಹಾಯಕರು | 7400-13120 | 1 |
| 3. | ಸಹಾಯಕ ಕಾರ್ಯನಿರ್ವಾಹಕ ಅಭಿಯಂತರರು, ಮಾರುಕಟ್ಟೆ ಅಭಿವೃದ್ಧಿ ಯೋಜನೆ, ಹಾವೇರಿ | 7400-13120 | 1 |
| 4. | ಸಹಾಯಕ ಅಭಿಯಂತರರು | 6000-11200 | 4 |
| 5. | ಹೆಡ್ ಡ್ರಾಫ್ಟ್ ಮೆನ್ | 5575-10620 | 1 |
| 6. | ಆರ್ಕ್ಟ ಟೆಕ್ಟ್ ಡ್ರಾಫ್ ಮೆನ್ | 4575-8400 | 1 |
| 7. | ಮ್ಯಾನೇಜರ್ | 5200-9580 | 1 |
| 8. | ಡ್ರಾಫ್ಟ್ ಮೆನ್ | 4575-8400 | 1 |
| 9. | ಶೀಘ್ರಲಿಪಿಗಾರರು | 3850-7050 | 1 |
| 10. | ಪ್ರಥಮ ದರ್ಜೆ ಸಹಾಯಕರು | 3850-7050 | 1 |
| 11. | ದ್ವಿತೀಯ ದರ್ಜೆ ಸಹಾಯಕರು | 3000-5450 | 2 |
| 12. | ಬೆರಳಚ್ಚುಗಾರರು | 3000-5450 | 2 |
| 13. | ಅಟೆಂಡರ್ | 2600-4350 | 2 |
| 14. | ಜವಾನರು | 2500-3850 | 4 |

**ಅನುಬಂಧ-ಈ**

**ಸರ್ಕಾರಿ ಆದೇಶ ಸಂಖ್ಯೆ: ಸಇ 122 ಎಂಆರ್ಇ 2003, ಬೆಂಗಳೂರು, ದಿನಾಂಕ: 1ನೇ ಸೆಪ್ಟೆಂಬರ್ 2003**

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ವೇತನ ಶ್ರೇಣಿ ರೂ. | ಒಟ್ಟು ಹುದ್ದೆಗಳು |
|---|---|---|---|
| 1. | ಅಧೀಕ್ಷಕ ಅಭಿಯಂತರರ ವಾಹನ ಚಾಲಕರು | 3000-5450 | 1 |

**ಬಿ.ಎಸ್. ಜಾಪಾಲಿ**

ಪಿ.ಆರ್. 1115 ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಶ್ರೀ ಕಂಪಲಪ್ಪ ಬಿನ್ ಲೇಟ್ ದೊಡ್ಡಮಲ್ಲಪ್ಪ, ಚನ್ನಸಾಗರಹಟ್ಟಿ,ಸಿ.ಕೆ.ಪುರ ಅಂಚೆ, ಪಾವಗಡ ತಾ. ತುಮಕೂರು ಜಿಲ್ಲೆ ಇವರನ್ನು ಪದವಿಪೂರ್ವ ಶಿಕ್ಷಣ ಇಲಾಖೆಯ ಕನ್ನಡ ಉಪನ್ಯಾಸಕರ ಹುದ್ದೆಗೆ ನೇಮಕಾತಿ ಮಾಡುವ ಬಗ್ಗೆ.

**ಓದಲಾಗಿದೆ:**

1. ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ.ಪಿಎಸ್‌ಸಿ1ಆರ್‌ಟಿಬಿ 95 ದಿನಾಂಕ 29.06.1995
2. ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಮಧ್ಯಾಂತರ ಆದೇಶ ದಿನಾಂಕ 25.09.1996.
3. ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ38 ಆರ್‌ಟಿಬಿ 97 ದಿನಾಂಕ 29.01.1997
4. ಸರ್ಕಾರದ ಅಧಿಸೂಚನೆ ಸಂಖ್ಯೆ ಇಡಿ 45 ಡಿಪಿಐ 94 ದಿ: 31.01.1997
5. ಸರ್ಕಾರದ ಅಧಿಸೂಚನೆ ಸಂಖ್ಯೆ ಇಡಿ 30 ಡಿಪಿಐ 97 ದಿ: 19.09.1997
6. ಮಾನ್ಯ ಉಚ್ಚ ನ್ಯಾಯಾಲಯದ ಆದೇಶ ಸಂ 36028/98 ದಿ: 29.10.2002.
7. ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ ಪಿಎಸ್‌ಸಿ38ಆರ್‌ಟಿಬಿ 95 ದಿನಾಂಕ 03.03.2003
8. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ.ಆರ್(1)1187/ಪಿಎಸ್‌ಸಿ/2002-03. ದಿನಾಂಕ 06.03.2003

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ 29.06.1995ರ ಅಧಿಸೂಚನೆಯಲ್ಲಿ ಕರ್ನಾಟಕ ಲೋಕಸೇವಾ ಆಯೋಗ, ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿನ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ೮೭ ಕನ್ನಡ ಉಪನ್ಯಾಸಕರ ಹುದ್ದೆಗಳಿಗಾಗಿ ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಆಹ್ವಾನಿಸಲಾಗಿದ್ದು, ಅದರಂತೆ ದಿನಾಂಕ 5.7.96ರಿಂದ 12.7.96ರವರೆಗೂ ಮತ್ತು 25.7.96ರಂದು ಸಂದರ್ಶನ ನಡೆಸಿ ದಿನಾಂಕ 9.8.96ರಂದು ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದೆ. ಸದರಿ ಹುದ್ದೆಗಳಿಗೆ ಸಂಬಂಧಿಸಿದಂತೆ ''ಗೊಲ್ಲ'' ಜಾತಿಗೆ ಸೇರಿದ್ದು, ಪ್ರವರ್ಗ-೧ರ ಅಭ್ಯರ್ಥಿಯಾಗಿದ್ದ ಶ್ರೀ ಕಂಪಲಪ್ಪ ಇವರು ಜಾತಿ ಪ್ರಮಾಣ ಪತ್ರವನ್ನು ನಿಗದಿತ ನಮೂನೆ-2ರಲ್ಲಿ ದಿನಾಂಕ 01.08.1995ರಂದು ಪಾವಗಡ ತಹಶೀಲ್ದಾರರಿಂದ ಪಡೆದು ಸಲ್ಲಿಸಿದ್ದು, ಈ ಅರ್ಜಿ ನಮೂನೆಯು 4 ಭಾಗಗಳನ್ನು

ಹೊಂದಿದ್ದು 2ನೇ ಭಾಗದಲ್ಲಿ ತಂದೆ, ತಾಯಿ ಅಥವಾ ಪೋಷಕರ ರುಜು ಇಲ್ಲದೆ ಇದ್ದುದರಿಂದ ಸಾಮಾನ್ಯ ಅಭ್ಯರ್ಥಿಯೆಂದು ಪರಿಗಣಿಸಿ; ಪ್ರಮಾಣ ಪತ್ರ ನಿಯಮಾನುಸಾರ ಇಲ್ಲವೆಂದು ತೀರ್ಮಾನಿಸಿ ಅವರ ಮೀಸಲಾತಿಯನ್ನು ತಿರಸ್ಕರಿಸಿ ದಿನಾಂಕ 6.7.96ರಂದು ಸಾಮಾನ್ಯ ಅಭ್ಯರ್ಥಿಯಾಗಿ ಸಂದರ್ಶನ ಮಾಡಿ ಆಯ್ಕೆ ಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿನ ಪ್ರವರ್ಗ-೧ರ ಮೀಸಲಾತಿ ಅಡಿಯಲ್ಲಿ ಶ್ರೀ ಚಂದ್ರಪ್ಪ ಹೆಚ್. ಇವರನ್ನು ಆಯ್ಕೆ ಮಾಡಿದೆ. ಇದರ ವಿರುದ್ಧ ಶ್ರೀ ಕಂಪಲಪ್ಪ ಇವರು ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಲ್ಲಿಸಿದ್ದು ಮಾನ್ಯ ನ್ಯಾಯಾಲಯವು ಅರ್ಜಿ ಸಂಖ್ಯೆ 6235/96ರ ಮೇಲೆ ಓದಲಾದ (2) ದಿನಾಂಕ 25.09.96ರ ಮಧ್ಯಂತರ ಆದೇಶದಲ್ಲಿ ಅವರನ್ನು ಪ್ರವರ್ಗ -1 ಮೀಸಲಾತಿಯ ಅಭ್ಯರ್ಥಿಯೆಂದು ಪರಿಗಣಿಸಬೇಕೆಂದು ಆದೇಶಿಸಿದೆ. ಆದರೆ, ಸದರಿ ಹುದ್ದೆಗಳಿಗೆ ದಿನಾಂಕ 9.8.96ರಂದೇ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ್ದ ಪ್ರಯುಕ್ತ ಆಯೋಗವು ಸದರಿ ಮಧ್ಯಂತರ ಆಜ್ಞೆಯನ್ನು ಪಾಲಿಸಿರುವುದಿಲ್ಲ. ಅಂತಿಮವಾಗಿ ನ್ಯಾಯ ಮಂಡಳಿಯು ಸದರಿ ಅರ್ಜಿಯ ಮೇಲೆ ಕರ್ನಾಟಕ ಲೋಕಸೇವಾ ಆಯೋಗವು ಸರಿಯಾದ ತೀರ್ಮಾನ ಕೈಗೊಂಡಿರುವುದಾಗಿ ತಿಳಿಸುವ ಮೂಲಕ ದಿನಾಂಕ 21.07.1998ರ ಆದೇಶದಲ್ಲಿ ಸದರಿ ಅರ್ಜಿಯನ್ನು ವಜಾಗೊಳಿಸಿರುತ್ತದೆ.

ತದನಂತರ ಕರ್ನಾಟಕ ಲೋಕ ಸೇವಾ ಆಯೋಗವು ಮೇಲೆ ಓದಲಾದ ಕ್ರಮಾಂಕ 3ರ ಅಧಿಸೂಚನೆಯಲ್ಲಿ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದ್ದು, ಮುಖ್ಯ ಪಟ್ಟಿಯಲ್ಲಿ 87 ಅಭ್ಯರ್ಥಿಗಳು ಹಾಗೂ ಹೆಚ್ಚುವರಿ ಪಟ್ಟಿಯಲ್ಲಿ 9 ಅಭ್ಯರ್ಥಿಗಳನ್ನು ಆಯ್ಕೆ ಮಾಡಿರುತ್ತದೆ. ಅದರಂತೆ ಸರ್ಕಾರವು ಮೇಲೆ ಓದಲಾದ ಕ್ರಮಾಂಕ (4)ರ ಅಧಿಸೂಚನೆಯನ್ವಯ ಮುಖ್ಯ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳನ್ನು ಹಾಗೂ ಮೇಲೆ ಓದಲಾದ ಕ್ರಮಾಂಕ (5)ರನ್ವಯ ಹೆಚ್ಚುವರಿ ಪಟ್ಟಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶ ನೀಡಿದೆ.

ಮೇಲಿನ ಆದೇಶಗಳ ಹಿನ್ನಲೆಯಲ್ಲಿ ಶ್ರೀ ಕಂಪಲಪ್ಪ ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿದ್ದು, ನ್ಯಾಯಾಲಯವು ಮೇಲೆ ಓದಲಾದ (6) ದಿನಾಂಕ 29.10.2002ರ ತೀರ್ಪಿನಲ್ಲಿ ಅರ್ಜಿದಾರರ ತಂದೆ ತಾಯಿ ಇಲ್ಲದಿರುವುದರಿಂದ ಹಾಗು ಅರ್ಜಿದಾರರು ವಯಸ್ಕರಾಗಿರುವುದರಿಂದ ನಮೂನೆ-2ರಲ್ಲಿ ತಂದೆ-ತಾಯಿ ಸಹಿ ಇರದೇ ಇರುವ ಪ್ರಯುಕ್ತ ಪರಿಗಣಿಸದೇ ಇರುವುದು ತಪ್ಪು ಎಂದು ತೀರ್ಪು ನೀಡುವ ಮೂಲಕ ಇವರನ್ನು ಆಯ್ಕೆ ಪಟ್ಟಿಯಲ್ಲಿ ಸೇರ್ಪಡೆಗೊಳಿಸುವಂತೆ ಆದೇಶಿಸಿದೆ. ಅದರಂತೆ ಕರ್ನಾಟಕ ಲೋಕಸೇವಾ ಆಯೋಗವು ಶ್ರೀ ಕಂಪಲಪ್ಪ ಇವರನ್ನು ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿನ ಕನ್ನಡ ಉಪನ್ಯಾಸಕರ ಹುದ್ದೆಗೆ ದಿನಾಂಕ 29.1.1997ರ ಅಂತಿಮ ಆಯ್ಕೆಪಟ್ಟಿಯ ಹೆಚ್ಚುವರಿ ಪಟ್ಟಿಯಲ್ಲಿ ಪ್ರವರ್ಗ-1 ಮೀಸಲಾತಿಯಡಿ ಆಯ್ಕೆ ಮಾಡಿ ಕ್ರಮ ಸಂಖ್ಯೆ 8ರ ಅಭ್ಯರ್ಥಿ ಶ್ರೀಮತಿ ಹೇಮಲತ ಮತ್ತು ಕ್ರಮ ಸಂಖ್ಯೆ 9ರ ಅಭ್ಯರ್ಥಿ ಶ್ರೀ ಹೆಚ್. ಚಂದ್ರಪ್ಪ ಇವರ ಮಧ್ಯೆ 8-ಎ ಎಂದು ನಿಗದಿಪಡಿಸಿ ಮೇಲೆ ಓದಲಾದ (7) ದಿನಾಂಕ 3.03.03ರ ಅಧಿಸೂಚನೆಯನ್ವಯ ಅಂತಿಮ ಆಯ್ಕೆ ಪಟ್ಟಿಯನ್ನು ಪ್ರಕಟಿಸಿದೆ. ಸದರಿಯವರ ನೇಮಕಾತಿ ಮಾಡುವ ಬಗ್ಗೆ ಇವರ ಮೂಲ ಅರ್ಜಿ ಹಾಗೂ ಇತರೆ ದಾಖಲಾತಿಗಳೊಂದಿಗೆ ಮೇಲೆ ಓದಲಾದ (8)ರ ದಿನಾಂಕ 06.03.2003 ಪತ್ರದೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ಇಡಿ 55 ಡಿಪಿಐ 99 ಬೆಂಗಳೂರು, ದಿನಾಂಕ:29ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಕಂಪಲಪ್ಪ ಬಿನ್ ಲೇಟ್ ದೊಡ್ಡಮಲ್ಲಪ್ಪ, ಚನ್ನಸಾಗರಹಟ್ಟಿ, ಸಿ.ಕೆ.ಪುರ ಅಂಚೆ, ಪಾವಗಡ ತಾ. ತುಮಕೂರು ಜಿಲ್ಲೆ ಇವರನ್ನು ಪದವಿಪೂರ್ವ ಶಿಕ್ಷಣ ಇಲಾಖೆ ಸರ್ಕಾರಿ ಪದವಿಪೂರ್ವ ಕಾಲೇಜಿನ ವೇತನ ಶ್ರೇಣಿ ರೂ. 6000-150-7200-200-8800-260-10880-320-11200ರ ಕನ್ನಡ ಉಪನ್ಯಾಸಕರ ಹುದ್ದೆಗೆ ಹೆಚ್ಚುವರಿ ಪಟ್ಟಿಯಲ್ಲಿ ಕ್ರಮ ಸಂಖ್ಯೆ 8 ಮತ್ತು 9ರ ಮಧ್ಯೆ 8-ಎ ಎಂದು ಪರಿಗಣಿಸಿ ಎರಡು ವರ್ಷಗಳ ಪರೀಕ್ಷಾರ್ಥಿಯಾಗಿ ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ನೇಮಕಾತಿ ಮಾಡಲಾಗಿದೆ. ಇವರಿಗೆ ಸ್ಥಳ ನಿಯುಕ್ತಿಗೊಳಿಸುವಂತೆ ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಆದೇಶಿಸಲಾಗಿದೆ.

**ಷರತ್ತು ಮತ್ತು ನಿಬಂಧನೆಗಳು:**

1. ಇವರ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಮತ್ತು ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ನಿಯಮ/ಆದೇಶಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

2. ಇವರು 1977ರ ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಗೆ ಬದ್ಧರಾಗಿರುತ್ತಾರೆ. ಪರೀಕ್ಷಾರ್ಥ ಸೇವಾವಧಿಯಲ್ಲಿ ಸದರಿ ಹುದ್ದೆಗೆ ಅನರ್ಹರೆಂದು ಕಂಡುಬಂದಲ್ಲಿ ಯಾವುದೇ ಮುನ್ಸೂಚನೆ ನೀಡದೇ ಇವರನ್ನು ಸೇವೆಯಿಂದ ಬಿಡುಗಡೆ ಗೊಳಿಸಲಾಗುವುದು.

3. 1974ರ ಕರ್ನಾಟಕ ನಾಗರೀಕ ಸೇವಾ (ಇಲಾಖಾ ಪರೀಕ್ಷೆಗಳು) ನಿಯಮಾವಳಿಯಲ್ಲಿ ಮೇಲ್ಕಂಡ ಹುದ್ದೆಗೆ ನಿಗದಿ ಪಡಿಸಿರುವ ಕನ್ನಡ ಭಾಷಾ ಮತ್ತು ಇತರೆ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರಬೇಕು ಅಥವಾ ವಿನಾಯಿತಿ ಪಡೆಯತಕ್ಕದ್ದು.

4. ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವ ಸಮಯದಲ್ಲಿ ಅವರ ಮೂಲ ಅಂಕಪಟ್ಟಿ, ಪದವಿ ಪ್ರಮಾಣ ಪತ್ರ, ಜನ್ಮ ದಿನಾಂಕ, ಜಾತಿ ಪ್ರಮಾಣ ಪತ್ರ ಹಾಗೂ ಇತರೆ ಎಲ್ಲಾ ಮೂಲ ಪ್ರಮಾಣ ಪತ್ರಗಳನ್ನು ಪರಿಶೋಧನೆಗಾಗಿ ಹಾಜರುಪಡಿಸತಕ್ಕದ್ದು.

5. ಇವರನ್ನು ದೇಹದಾರ್ಢ್ಯದ ಬಗ್ಗೆ ವೈದ್ಯಕೀಯ ಮಂಡಳಿಯ ಪರಿಶೀಲನಾ ಪ್ರಪತ್ರ ಮತ್ತು ಪೋಲೀಸ್ ಪೂರ್ವೋತ್ತರಗಳ ಬಗ್ಗೆ ಪರಿಶೀಲನಾ ವರದಿಯನ್ನು ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆಯುವ ಷರತ್ತಿಗೆ ಒಳಪಟ್ಟು ಮಾಡಲಾಗಿದ್ದು, ಈ ಬಗ್ಗೆ ವೈದ್ಯಕೀಯ ಮಂಡಳಿ ಅಥವಾ ಸಂಬಂಧಪಟ್ಟ ಪೋಲೀಸ್ ಠಾಣೆಯಿಂದ ಸದರಿಯವರು ಸರ್ಕಾರಿ ಸೇವೆಗೆ ಅನರ್ಹರೆಂದು ಘೋಷಿಸಿದಲ್ಲಿ ಇವರು ಸೇವೆಯಲ್ಲಿ ಮುಂದುವರಿಯಲು ಹಕ್ಕಿರುವುದಿಲ್ಲ ಮತ್ತು ಸದರಿಯವರನ್ನು ಕರ್ನಾಟಕ ನಾಗರೀಕ ಸೇವೆಗಳು (ಪರೀಕ್ಷಾರ್ಥ) ನಿಯಮಾವಳಿಗಳು 1977ರ ನಿಯಮ 6ರನ್ವಯ ಸೇವೆಯಿಂದ ವಿಮುಕ್ತಿಗೊಳಿಸಲಾಗುವುದು.

6. ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿಗಳು 1977ರ ನಿಯಮ 18ರನ್ವಯ ನೇಮಕಾತಿ ಆದೇಶ ಹೊರಡಿಸಿದ 15 ದಿನಗಳ ಒಳಗಾಗಿ ಅಭ್ಯರ್ಥಿಯು ನಿರ್ದೇಶಕರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಕಛೇರಿಯಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

7. ನೇರ ನೇಮಕಾತಿಗಾಗಿ ಆಯ್ಕೆಯಾದ ಹೆಚ್ಚುವರಿ ಪಟ್ಟಿಯಲ್ಲಿ ಅರ್ಹತೆಯ ಆಧಾರದ ಮೇಲೆ ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ 8 ಮತ್ತು 9ರ ಮಧ್ಯದಲ್ಲಿ ಕ್ರಮ ಸಂಖ್ಯೆ 8ಎ ಎಂದು ಗುರುತಿಸಲಾಗಿದೆ. ಆ ಪ್ರಕಾರ ಜೇಷ್ಠತೆ ನಿಗದಿಪಡಿಸಬಹುದಾಗಿದ್ದರೂ ಸಹ ಉಚ್ಚನ್ಯಾಯಾಲಯದ ಆದೇಶದ ಮೇರೆಗೆಅಭ್ಯರ್ಥಿಯು ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಮಾತ್ರ ವೇತನ ಹಾಗೂ ಇತರೆ ಭತ್ಯೆಗಳಿಗೆ ಅರ್ಹತೆ ಹೊಂದಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1116

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಇಂಧನ ಸಚಿವಾಲಯ

**ವಿಷಯ:** ಮೆಸರ್ಸ್ ಲಕ್ಷ್ಮೀ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ- ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಕೊನ್ನಾಪುರದೊಡ್ಡಿ / 2003 / 900, ದಿನಾಂಕ: 18.6.2003.
2. ದಿನಾಂಕ: 4.7.2003 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಲಕ್ಷ್ಮೀ ಪವರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು, ಈ ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಕೊನ್ನಾಪುರ ದೊಡ್ಡಿ ಗ್ರಾಮದ ಶಿಂಷಾ ನದಿಗೆ ಅಡ್ಡಲಾಗಿ ವಿ.ವಿ.ಎನ್.ಎಲ್.ನ ಶಿಂಷಾ ಯೋಜನೆಯಿಂದ 3 ಕಿ.ಮೀ. ಕೆಳತೊರೆಯಲ್ಲಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 149 ಎನ್‌ಸಿಇ 2003, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2003**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಲಕ್ಷ್ಮೀ ಪವರ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು. ಈ ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಕೊನ್ನಾಪುರ ದೊಡ್ಡಿ ಗ್ರಾಮದ ಶಿಂಷಾ ನದಿಗೆ ಅಡ್ಡಲಾಗಿ ವಿ.ವಿ.ಎನ್.ಎಲ್.ನ ಶಿಂಷಾ ಯೋಜನೆಯಿಂದ 3 ಕಿ.ಮೀ. ಕೆಳತೊರೆಯಲ್ಲಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (ಲ್ಯಾಂಜಿಟ್ಯೂಡ್ 77-14'-10" ಪೂರ್ವ ಮತ್ತು ಲ್ಯಾಂಜಿಟ್ಯೂಡ್ 12-19'-12" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝುರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1117

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ಹಿಂದಿನ ತಹಶೀಲ್ದಾರ್ ಹಿರೇಕೆರೂರು ತಾಲ್ಲೂಕು ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯ ಪ್ರತಿಕೂಲ ಷರಾವನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಬೆಳಗಾವಿ ವಿಭಾಗಾಧಿಕಾರಿಯವರ ಪತ್ರದ ಸಂ:ಕಂಶಾ:ಡಿವಿಸಿ:ಅಸ:02-03, ದಿನಾಂಕ:5-2-2003.
2. ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ತಹಶೀಲ್ದಾರ್ ಇವರ ದಿನಾಂಕ:20-1-03ರ ಪತ್ರ.
3. ಸರ್ಕಾರಿ ಪತ್ರದ ಸಂ:ಆರ್‌ಡಿ 54 ಎಎಸ್‌ಡಿ 03, ದಿನಾಂಕ:29-5-03.
4. ಉಪ ವಿಭಾಗಾಧಿಕಾರಿಗಳು, ಹಾವೇರಿ ಉಪ ವಿಭಾಗ, ಹಾವೇರಿ, ಇವರ ಪತ್ರದ ಸಂ:ಸಿಬ್ಬಂದಿ:ವಹಿ:18: 2003-04, ದಿನಾಂಕ:4-6-2003.

**ಪ್ರಸ್ತಾವನೆ:**

ಈ ಮೇಲೆ ಓದಲಾದ ಕ್ರ.ಸಂ. (1)ರ ಪತ್ರದ ಮೂಲಕ ವಿಭಾಗಾಧಿಕಾರಿಗಳು, ಬೆಳಗಾಂ ವಿಭಾಗ, ಬೆಳಗಾಂ ಇವರು ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ತಹಶೀಲ್ದಾರ್, ಹಿರೇಕೆರೂರು ತಾಲ್ಲೂಕು ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ವರದಿ ಮಾಡುವ ಪ್ರಾಧಿಕಾರ ಮಾಡಿರುವ ಪ್ರತಿಕೂಲ ಷರಾವನ್ನು ಸದರಿ ತಹಶೀಲ್ದಾರ್‌ರಿಗೆ ಜಾರಿ ಮಾಡಿರುವ ಬಗ್ಗೆ ತಿಳಿಸಿರುತ್ತಾರೆ.

ಈ ಮೇಲೆ ಓದಲಾದ ಕ್ರ. ಸಂ. (2)ರ ದಿನಾಂಕ:20-1-03ರ ಮನವಿಯಲ್ಲಿ ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ತಹಶೀಲ್ದಾರ್, ಇವರು ಸರ್ಕಾರಕ್ಕೆ ಮನವಿ ಸಲ್ಲಿಸಿ, 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ನಮೂದಾಗಿರುವ ಪ್ರತಿಕೂಲ ಷರಾವನ್ನು ಕೈಬಿಡುವಂತೆ ವಿವರಗಳನ್ನು ಸಲ್ಲಿಸಿ ಕೋರಿರುತ್ತಾರೆ.

ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ತಹಶೀಲ್ದಾರ್ ಇವರ ಪ್ರತಿಕೂಲ ಷರಾವನ್ನು ಕೈಬಿಡುವಂತೆ ಕೋರಿರುವ ಮನವಿಯನ್ನು ವರದಿ ಮಾಡುವ ಪ್ರಾಧಿಕಾರಿಯಾದ ಶ್ರೀ ಬಿ.ಹೆಚ್. ಪೂಜಾರ್, ಸಹಾಯಕ ಕಮಿಷನರ್, ಹಾವೇರಿ ಉಪವಿಭಾಗ, ಹಾವೇರಿ ಇವರಿಗೆ ಕಳುಹಿಸಿ ಈ ಬಗ್ಗೆ ನಿಲುವು: ಅಭಿಪ್ರಾಯವನ್ನು ನೀಡಲು ಕೋರಲಾಗಿತ್ತು.

ಓದಲಾದ ಕ್ರ. ಸಂ. (4)ರ ಪತ್ರದಲ್ಲಿ ಉಪ ವಿಭಾಗಾಧಿಕಾರಿಗಳು, ಹಾವೇರಿ ಉಪ ವಿಭಾಗ, ಹಾವೇರಿ, ಇವರು ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ಬರೆದಿರುವ ಪ್ರತಿಕೂಲ ಷರಾಗಳು ಸರಿ ಇರುತ್ತವೆ ಹಾಗೂ ಅದನ್ನು ದೃಢೀಕರಿಸಿರುತ್ತೇನೆಂದು ಅಭಿಪ್ರಾಯ ವ್ಯಕ್ತ ಪಡಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ವರದಿ ಮಾಡುವ ಪ್ರಾಧಿಕಾರಿಯ ಅಭಿಪ್ರಾಯವನ್ನು ಪರಿಗಣಿಸಿ, ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ತಹಶೀಲ್ದಾರ್, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಹಾಗೆಯೇ ಉಳಿಸಿಕೊಳ್ಳಲು ತೀರ್ಮಾನಿಸಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 54 ಎಎಸ್‌ಡಿ 2003, ಬೆಂಗಳೂರು, ದಿನಾಂಕ: 29ನೇ ಆಗಸ್ಟ್ 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, 2000ರ ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿ) ನಿಯಮಾವಳಿಯ 10(2)ನೇ ನಿಯಮದಲ್ಲಿ ವಿಹಿತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಶ್ರೀ ಎಸ್.ಬಿ. ಚಿಕ್ಕಮುನವಳ್ಳಿ, ಹಿಂದಿನ ತಹಶೀಲ್ದಾರ್‌ರು, ಹಿರೇಕೆರೂರು ತಾಲ್ಲೂಕು, ಹಾವೇರಿ ಜಿಲ್ಲೆ, ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಹಾಗೆಯೇ ಉಳಿಸಲು ಈ ಮೂಲಕ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1118

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಸೇವೆಗಳು-3)